# ಸಿದ್ಧಗಂಗಾ

ಸಂಪುಟ-32 ಸಂಚಿಕೆ-2 ಫೆಬ್ರವರಿ-1996.





ಶ್ರೀ ಮಠದಲ್ಲಿ ಮಹಾಶಿವರಾತ್ರಿ ಮರುದಿನ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವ ದೃಶ್ಯ.



ಪೂಜ್ಯ ಶ್ರೀ ಶ್ರೀಗಳು ಜಾತ್ರೆಯ ಜಾನುವಾರಗಳ ಪ್ರದರ್ಶನದಲ್ಲಿ ಆಯ್ಕೆಯಾದ ಉತ್ತಮ ರಾಸುಗಳನ್ನು ವೀಕ್ಷಿಸುತ್ತಿದ್ದಾರೆ.

# ಸಿದ್ಧಗಂಗಾ

ಸಂಪುಟ-32 ಸಂಚಿಕೆ-2 ಫೆಬ್ರವರಿ-1996.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬಿತ್ತಿ ಬೆಳೆದಿಹೆತಂದೆ ಕಲ್ಯಾಣ ಸಸಿಗಳನು
ಹೊತ್ತು ನಡೆದಿರುವೆ ಜಗದಿರವ । ಶ್ರೀ ಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

"ಜಗದೆದೆಯ ಗವಿಯೊಳಗೆ" ಅವಿತಿರುವ ಅಲ್ಪವನು
ಯುಗದ ಕತ್ತಲೆಯೆನಿಪ ಸ್ವಾರ್ಥವನು । ಪರಿಹರಿಪ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಹೊರಗೆ ಲೋಕದ ಸೇವೆ ಒಳಗೆ ಲಿಂಗದಪೂಜೆ
ಹೊರ ಒಳಗೆ ನಡೆಸಿರುವೆ ಗುರುಪೂಜೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥



-ಹೆಚ್. ವಿ. ವೀರಭದ್ರಯ್ಯ

## ಶ್ರೀವಾಣಿ



ಚುನಾವಣೆ ಬರುತ್ತಿದೆ. ಲೋಕಸಭಗ ಪ್ರತಿನಿಧಿಗಳನ್ನು ಆಯ್ಕೆ ಮಾಡಬೇಕಾಗಿದೆ. ಹಲವಾರು ಪಕ್ಷಗಳ ಪ್ರಚಾರ ಸಮರದಲ್ಲಿ ಮುನ್ನೆಡೆದಿವೆ. ತಮ್ಮ ತಮ್ಮ ಪಕ್ಷದ ಪ್ರಣಾಳಿಕೆಗಳನ್ನು ಜನತೆಯ ಮುಂದಿಡುತ್ತಿವೆ. ಒಳ ಹೊರಗಿನ ವ್ಯವಹಾರ ಷುರುವಾಗಿದೆ. ಅಧಿಕಾರದಾಹ ವಿಜೃಂಭಿಸಿದೆ. ಹಣದ ಹೊಳೆ ಅಪಮಾರ್ಗದಲ್ಲಿ ಹರಿಯುತ್ತಿದೆ- ಭೋಗ ಜೀವನದ ಕಾಮನ ಬಿಲ್ಲು ಕಾಣ ಬರುತ್ತಿದೆ. ಪ್ರಜಾಪ್ರಭುತ್ವದ ನೈಜ ಧ್ಯೇಯ ಧೋರಣೆಗಳಲ್ಲಿ ಕಾಲಗರ್ಭ ಸೇರುತ್ತಿದೆ. ಆ ಪಕ್ಷ, ಈ ಪಕ್ಷ ಎಂಬುದಿಲ್ಲ. ಎಲ್ಲ ಪಕ್ಷಗಳೂ "ಎನ್ನ ಚಿತ್ತವು ಹತ್ತಿಯ ಹಣ್ಣು" ಎಂಬಂತಿವೆ. ಬಣ್ಣದ ಮಾತುಗಳಿಗೆ ಸುಳ್ಳು ಆಶ್ವಾಸನೆಗಳಿಗೆ ಆಕರ್ಷಕ ಯೋಜನೆಗಳಿಗೆ ಪ್ರಾಯ ಬರುತ್ತಿದೆ. ರಾಷ್ಟ್ರ ಚಿಂತನೆ ಹಗಲು ಪಂಜು ಹಿಡಿದು ನೋಡುವಂತಾಗಿದೆ ಜನನಾಯಕರು ವಿಶ್ವಾಸ ಕಳೆದುಕೊಳ್ಳುತ್ತಿದ್ದಾರೆ. ತಮ್ಮ ತಮ್ಮ ಉದ್ಧಾರದಲ್ಲೇ ಮಗ್ನರಾಗಿ ದೇಶ ಭವಿಷ್ಯವನ್ನು ಗಾಳಿಗೆ ತೂರುವಲ್ಲಿ ಸ್ಪರ್ಧಿಗಳಾಗಿ ಮುನ್ನುಗ್ಗುತ್ತಿದ್ದಾರೆ. ದೇಶಕ್ಕಾಗಿ, ಜನರಿಗಾಗಿ ತ್ಯಾಗ ಮಾಡಿದವರಿಂದು ಮೌನವ್ರತ ಧಾರಿಗಳಾಗಿದ್ದಾರೆ ಎಲ್ಲೆಲ್ಲೂ ಷಡ್ಯಂತ್ರಗಳ ಜಾಲ ಬೀಸಲಾಗಿದೆ. ಜಾತ್ಯತೀತ ರಾಷ್ಟ್ರವೆಂದು ಘೋಷಣೆ ಮಾಡಿ ಜಾತಿಯ ಮಾತಿಲ್ಲದೆ ಹೆಜ್ಜೆಯಿಡುವ ಏಕೈಕ ನಿದರ್ಶನವಿಲ್ಲದಂತಾಗಿದೆ. ಮುಂಬರುವ ಯುವಜನಾಂಗ ಶತಶತಮಾನಗಳ ಪರ್ಯಂತ ಶಪಿಸುವ ಹಂತಕ್ಕೆ ರಾಷ್ಟ್ರ ರಾಜಕಾರಣವನ್ನಿಂದು ತಂದು ನಿಲ್ಲಿಸಲಾಗಿದೆ. ಧರ್ಮ ಬೇಡ, ಸಂಸ್ಕೃತಿ ಬೇಡ, ಜನಕಲ್ಯಾಣ ಯಾರಿಗೆ ಬೇಕು ? ತಾನು, ತಮ್ಮ ಪಕ್ಷ ಅಧಿಕಾರಕ್ಕೆ ಬಂದರೆ ಸಾಕು. ಎಂಬುದೊಂದೇ ಮಂತ್ರವಾಗಿದೆ. ಆಪಾಯದ ಅಂಚಿಗೆ ದೇಶವನ್ನು ತಂದು ನಿಲ್ಲಿಸುತ್ತಿದ್ದೇವೆ ಎಂಬ ಅರಿವಿಲ್ಲದಂತಾಗಿದೆ. ಆತ್ಮಾವಲೋಕನ ಇಲ್ಲ. ಆತ್ಮವಿಮರ್ಶೆ ಇಲ್ಲ. ಸ್ವಾರ್ಥದ ಜಾತ್ರೆಗೆ ನಡೆದಿದೆ ಜನತೆ. ಸಾಮಾನ್ಯರ, ಮುಗ್ಧರ, ಅಮಾಯಕರ ಅಮೂಲ್ಯ ಮತದಾನ ಭ್ರಷ್ಟಮಾರ್ಗಕ್ಕೆ ರಾಜದೀಪ ಹಿಡಿದು ನಡೆದಿದೆ. ಭಗವಾನ್ ಬಸವಣ್ಣ ಕಟ್ಟಿದ "ಭಕ್ತಿ ಪಕ್ಷ"ದಂಥ ಪ್ರಾಮಾಣಿಕ ಪಕ್ಷಗಳ ತುರ್ತು ಇಂದು ಅತೀವವಾಗಿದೆ. ಬಸವಾದಿ ಶರಣರಿಂದು ಮತ್ತೆ ಉದಯಿಸಬೇಕಾಗಿದೆ. ಅದಕ್ಕಾಗಿ ಇನ್ನೆಷ್ಟು ದಿನಕಾಯ ಬೇಕೋ? ಇನ್ನೆಷ್ಟು ದೂರ ನಡೆಯಬೇಕೋ?

ತ್ರಿವಿಧ ದಾಸೋಹ ಮೂರ್ತಿಗಳಾದ ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ**

## ವಜ್ರಮಹೋತ್ಸವ ಪ್ರತಿಷ್ಠಾನ

ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.

* ಶ್ರೀ ಸಿದ್ಧಗಂಗೆ ಸಿದ್ಧಿಯ ತಾಣ. ನಾಡಿನಲ್ಲಿ ವಿದ್ಯೆ ದಾಸೋಹಕ್ಕೆ ಹೆಸರಾಗಿದೆ.
* ಇಲ್ಲಿಯ ಸೇವಾಕಾರ್ಯಗಳು ಸಾಗರವನ್ನು ಹೋಲುತ್ತವೆ.
* ವಿಶಿಷ್ಟ ಸೇವಾಕೇಂದ್ರವಾಗಿ ಬೆಳಗುತ್ತಿದೆ.
* ಶ್ರೀ ಶ್ರೀಗಳ ತ್ಯಾಗ ಮತ್ತು ನಿರಂತರ ಕ್ರಿಯಾಶೀಲತೆಯೇ ಪ್ರಗತಿಪಥದ ಬೆಳವಣಿಗೆಗೆ ಆಧಾರ.
* ಸೇವೆಯೇ ಅವರ ಬದುಕಿನ ದಿನಚರಿ. 88 ರ ಹರೆಯದಲ್ಲೂ ದಣಿವರಿಯದ ಬದುಕು ಅವರದಾಗಿದೆ.
* ಶ್ರೀ ಶ್ರೀಗಳವರ ಮಹಾ ಸಾಧನೆ ಮೇರು ಸದೃಶವಾಗಿದೆ.
* ಈ ಸಾಧನೆಯ ಪ್ರತೀಕವಾಗಿ ಸ್ಮರಣೀಯ ಸ್ಮಾರಕಗಳು ನಿರ್ಮಾಣವಾಗಿವೆ.
* ಇವುಗಳ ವೆಚ್ಚ 6 ಕೋಟಿ ರೂಗಳು
* ಮಾನವ ಭೂಗ್ರಹದಲ್ಲಿ ಇಂಥ ಕಲಾತ್ಮಕ ಬೃಹತ್ ಕಟ್ಟಡಗಳು ಅತಿವಿರಳ.
* ಇವು ಶ್ರೀ ಶ್ರೀಗಳ ಮಹಾನ್ ವ್ಯಕ್ತಿತ್ವ, ಸೇವಾತತ್ಪರತೆ ವಿದ್ಯಾ ಪ್ರಸಾರ ಮತ್ತು ಮಾನವೀಯ ಮೌಲ್ಯಗಳನ್ನು ಮುಂದಿನ ಜನಾಂಗಕ್ಕೆ ಶತಶತಮಾನಗಳ ಕಾಲ ಸಾರುತ್ತಾ ಸ್ಫೂರ್ತಿಯ ಬೆಳವಣಿಗೆಗೆ ನೆಲೆಯಾಗುತ್ತವೆ.
* 1996 ಏಪ್ರಿಲ್‌ನಲ್ಲಿ ವಜ್ರಮಹೋತ್ಸವ ಆಚರಿಸಿ ಬೃಹತ್ ಸ್ಮಾರಕ ಭವನಗಳನ್ನು ಶ್ರೀಮಠಕ್ಕೆ ನಾಡಿನ ಭಕ್ತಕೋಟಿ ಕೃತಜ್ಞತಾ ಪೂರ್ವಕವಾಗಿ ಅರ್ಪಿಸುತ್ತಾರೆ.
* ಸರ್ವರ ಏಳಿಗೆಗೆ ದಣಿವರಿಯದ ಬದುಕಿನಲ್ಲಿ ಮುನ್ನಡೆಯುತ್ತಿರುವ ಶ್ರೀ ಶ್ರೀಗಳವರ ವಜ್ರಮಹೋತ್ಸವ ನಿಧಿಗೆ ನಾಡಿನ ಭಕ್ತಾದಿಗಳು ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಉದಾರವಾಗಿ ಕಾಣಿಕೆ ನೀಡುವುದರೊಂದಿಗೆ ಯೋಜನೆಗಳು ಯಶಸ್ವಿಯಾಗಿ ಪೂರ್ಣವಾಗಲು ಕೋರುತ್ತೇವೆ.

ವಿ. ಸೂ. ಭವ್ಯ ಸ್ಮಾರಕಗಳ ಚಿತ್ರ ಹಿಂಬದಿ ಪುಟಗಳಲ್ಲಿ ನೋಡಿ.

**ಪದ್ಮಭೂಷಣ ಡಾ. ಎಂ. ಸಿ. ಮೋದಿ,**
ಅಧ್ಯಕ್ಷರು.

ಬಿ. ಎಸ್. ಮುದ್ದಪ್ಪ ಐ.ಎ.ಎಸ್. ಕಾರ್ಯಾಧ್ಯಕ್ಷರು. | ಎಸ್. ಎಸ್. ಹಸಬಿ, ಐ.ಪಿ.ಎಸ್ (ರಿ.) ಕಾರ್ಯದರ್ಶಿಗಳು.

## ಶ್ರೀ ಸಿದ್ಧಲಿಂಗೇಶ್ವರ ವಚನ

ಮಣ್ಣನಿಚ್ಚಿ ಮನೆಯ ಮಚ್ಚಿದವಂಗೆ
ಗುರುವಿನ ಮಚ್ಚೆಲ್ಲಿಯದೋ ?
ಹೆಣ್ಣನಚ್ಚಿ ಹೊನ್ನನಚ್ಚಿದವಂಗೆ
ಲಿಂಗದ ಮಚ್ಚೆಲ್ಲಿಯದೋ ?
ಹೆಂಡತಿ ಮಕ್ಕಳು ಬಂಧುಗಳು ಹಿತರೆಂದು ಮಚ್ಚಿದವರಿಗೆ
ಜಂಗಮದ ಮಚ್ಚೆಲ್ಲಿಯದೋ ?
ಗುರುಲಿಂಗ ಜಂಗಮವ ನಂಬದವರಿಗೆ
ಮುಕ್ತಿಯೆಂಬುದು ಕನಸಿನಲ್ಲಿಯೂ ಇಲ್ಲವಯ್ಯ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ
ನಿಮ್ಮ ನಂಬದ ಪಾಪಿಗಳಿಗೆ !

ಮಣ್ಣು ಹೆಣ್ಣು ಹೊನ್ನುಗಳನ್ನು ನಚ್ಚಿಕೊಂಡ ವ್ಯಕ್ತಿಗಳಲ್ಲಿ ಗುರುಲಿಂಗ ಜಂಗಮ ಭಕ್ತಿಯು ಇರಲಾರದು. ಯಾರು ಗುರು ಲಿಂಗ ಜಂಗಮರನ್ನು ಭಕ್ತಿಯಿಂದ ನಂಬದಿರುವರೊ ಅವರಿಗೆ ಮುಕ್ತಿಯೆಂಬುದು ಕನಸಿನಲ್ಲಿಯೂ ಕೂಡ ಸಾಧ್ಯವಾಗದು. ಯಾಕೆಂದರೆ ಅಂಥವರು ನಿಜವಾಗಿಯೂ ಪಾಪಿಗಳೇ ಆಗಿರುವರು. ಪಾಪಾತ್ಮರಿಗೆ ಮುಕ್ತಿಯೆಂಬುದೆಲ್ಲಿ ಬರಬೇಕು ! ಅವರಿಗೆ ಬಂಧನವೇ ಗತಿ

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ– ಶ್ರೀ ತೋಂ. ಸಿ. ಕೈಂ. ಸೇವಾ ಸಂಘ, ಎಡೆಯೂರು ಗದಗ)

## ಸಿದ್ಧಗಂಗಾ ಮಾಸ ಪತ್ರಿಕೆ

ಸಂಪಾದಕ ಮಂಡಳಿ

ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು.

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

ಎಂ. ರೇಣುಕಾರಾಧ್ಯ
ಸಹ ಸಂಪಾದಕರು

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

ಸಲಹಾ ಸಮಿತಿ

ಡಾ|| ಎಂ. ಎಸ್. ಚನ್ನಬಸಪ್ಪ
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹೆಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ
ಮುದ್ರಕರು

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ

### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 31ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

1–1–95 ರಿಂದ ಚಂದಾ ದರ
ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

ಏಪ್ರಿಲ್ ಎರಡರಂದು ಶ್ರೀ ಮಠದಲ್ಲಿ 'ಗುರುವಂದನ' ಸಮಾರಂಭ ನಡೆಯಿತು. ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ 88ನೆಯ ಜನ್ಮ ದಿನಾಚರಣೆಯ ಪುಣ್ಯ ಸಂದರ್ಭದಲ್ಲಿ 'ಗುರುವಂದನ' ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿವಿಧ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆಸಲ್ಲಿಸುತ್ತಿರುವ ಶಿಕ್ಷಕ ಶಿಕ್ಷಕೇತರ ಸಿಬ್ಬಂದಿ ಬಂಧುಗಳು ಸಾರ್ವಜನಿಕವಾಗಿ ಆಚರಿಸಿದ ಸಮಾರಂಭ ಅವಿಸ್ಮರಣೀಯ ವೆನಿಸಿತು. ಒಂದುನೂರಕ್ಕೂ ಹೆಚ್ಚು ವಿವಿಧ ಮಠಗಳಿಂದ ಹರಗುರು ಚರಮೂರ್ತಿಗಳು ದಯಮಾಡಿಸಿ ಗುರುವಂದನದಲ್ಲಿ ಪಾಲ್ಗೊಂಡರು. ನಾಡಿನ ಮೂಲೆ ಮೂಲೆಯಿಂದ ಭಕ್ತಾದಿಗಳು ಆಗಮಿಸಿದ್ದರು.

ಸಮಾರಂಭದ ದಿವ್ಯ ಅಧ್ಯಕ್ಷತೆಯನ್ನು ಸುತ್ತೂರು ವೀರಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರಮಹಾಸ್ವಾಮಿಗಳು ವಹಿಸಿ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟು ಆಶೀರ್ವದಿಸಿದರು.

ಸಮಾರಂಭವನ್ನು ರಾಜ್ಯದ ಜನತೆಯ ಪರವಾಗಿ ಉದ್ಘಾಟಿಸಿದ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಶ್ರೀ ಮಠದ ಸೇವೆಯನ್ನು ಪ್ರಶಂಶಿಸುತ್ತ ಪೂಜ್ಯ ಶ್ರೀ ಶ್ರೀಗಳವರ ಅನುಪಮ ವ್ಯಕ್ತಿತ್ವವನ್ನು ಕುರಿತು ಗುಣಗಾನ ಮಾಡಿದರು ಭಕ್ತಿ ಪುಷ್ಪಮಾಲೆಯನ್ನರ್ಪಿಸಿ ಪೂಜ್ಯ ಶ್ರೀಗಳು ನೂರುಕಾಲ ಬಾಳಲಿ ಎಂದು ಪ್ರಾರ್ಥಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳ ಭಾವಚಿತ್ರವನ್ನು ಅನಾವರಣ ಮಾಡಿದ ರಾಜ್ಯದ ಉಪಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಜೆ.ಹೆಚ್. ಪಟೇಲ್ ಅವರು ಶ್ರೀ ಮಠದ ನಿಷ್ಕಾಮ ಸೇವೆಯನ್ನು ಶ್ಲಾಘಿಸಿದರು.

ಸಚಿವರಾದ ಮಾನ್ಯ ಶ್ರೀ ಎಂ.ಪಿ. ಪ್ರಕಾಶ್ ಅವರು ಅಭಿನಂದನಾ ಭಾಷಣ ಮಾಡುತ್ತ ಬಸವಾದಿ ಶರಣರ ತತ್ವಗಳನ್ನು ಸಂದೇಶವನ್ನು ಕೃತಿರೂಪದಲ್ಲಿ ಉಳಿಸಿಕೊಂಡು ಬಂದಿರುವ ಪೂಜ್ಯ ಶ್ರೀಗಳವರ ಮಾರ್ಗವನ್ನು ಯುವ ಜನಾಂಗ ಅರಿತು ನಡೆಯಬೇಕು ಎಂದರು.

ಸಮಾರಂಭದಲ್ಲಿ ಲೋಕಸಭೆಯ ಉಪಸಭಾಪತಿಗಳಾದ ಮಾನ್ಯ ಶ್ರೀ ಎಸ್. ಮಲ್ಲಿಕಾರ್ಜುನಯ್ಯನವರು ಮಾತನಾಡುತ್ತ ಶ್ರೀ ಸಿದ್ಧಗಂಗಾ ಮಠದಲ್ಲಿ ಓದಿದ ವಿದ್ಯಾರ್ಥಿಯೆಂದರೆ ಅವನಿಗೊಂದು ವೈಶಿಷ್ಟ್ಯವಿರುತ್ತದೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಲ್ಲಿ ಕೆಲಸ ಮಾಡುವ ಬಂಧುವೆಂದರೆ ಅವನಿಗೊಂದು ವಿಶೇಷತೆಯಿರುತ್ತದೆ ಎಂದು ನುಡಿದರು.

ವಿಧಾನ ಪರಿಷತ್ತಿನ ಉಪಾಧ್ಯಕ್ಷಿಣಿಯಾದ ಶ್ರೀಮತಿ ರಾಣಿಸತೀಶ್ ಅವರು, ಶಾಸಕರಾದ ಮಾನ್ಯ ಶ್ರೀ ಎಸ್. ಶಿವಣ್ಣನವರು ಮಾತನಾಡಿದರು.

ಸಮಾರಂಭದಲ್ಲಿ ಸಮಾಜ ಸೇವೆಸಲ್ಲಿಸಿದ ನ್ಯಾಯನಿಷ್ಠುರಿ ನಿಜಶರಣ ಡಾ|| ಪಾಟೀಲ ಪುಟ್ಟಪ್ಪ, ಪ್ರಾಧ್ಯಾಪಕ ಪ್ರಶಾಂತ ಡಾ|| ಹಾ. ಮಾ. ನಾಯಕ, ರಾಜಕೀಯ ಮುತ್ಸದ್ದಿ ಮಾನ್ಯ ಶ್ರೀ ಕೆ. ಹೆಚ್. ರಂಗನಾಥ್, ಮತ್ತು ವಣಿಕ ಮಾಣಿಕ್ಯ ಮಾನ್ಯ ಶ್ರೀ ಟಿ. ಅನಂತರಾಮ ಶ್ರೇಷ್ಠಿಯವರನ್ನು ನೆನಪಿನಕೊಡುಗೆ-ಗಳನ್ನಿತ್ತು ಸನ್ಮಾನಿಸಲಾಯಿತು.

ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ಮಾಡುತ್ತ ನೈತಿಕ ದಿವಾಳಿ ಯಿಂದ ಸಮಾಜ ಮುಕ್ತವಾಗಬೇಕಾದರೆ ಭಗವಾನ್ ಬಸವಣ್ಣನವರ ಧ್ಯೇಯಾದರ್ಶ ಗಳನ್ನು ನಾವಿಂದು ಪಾಲಿಸಬೇಕಾಗಿದೆ ಎಂದು ನುಡಿದರು.

ಶಿವಾನುಭವ ಗೋಷ್ಠಿಯಲ್ಲಿ ಡಾ|| ಪಿ ವಿ. ನಾರಾಯಣ ಅವರು ಕಾಯಕ ಮತ್ತು ದಾಸೋಹವನ್ನು ಕುರಿತು ವಿಚಾರ ಪೂರ್ಣವಾದ ಉಪನ್ಯಾಸ ನೀಡಿದರು. ಮಾನ್ಯ ಶ್ರೀ ಷಣ್ಮುಖಯ್ಯ ಅಕ್ಕೂರು ಮಠ ಅವರು ಗುರು-ಲಿಂಗ-ಜಂಗಮದ ಮಹತ್ವವನ್ನು ಕುರಿತು ಉತ್ತಮ ವಿಚಾರಗಳನ್ನು ಸಭೆಯ ಗಮನಕ್ಕೆ ತಂದರು.

ಬೆಳಗಿನ ಅಧಿವೇಶನವನ್ನು ಬೆಂಗಳೂರು ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಗಳಾದ ಮಾನ್ಯ ಶ್ರೀ ಸಿ. ಸೋಮಶೇಖರ್ ಅವರು ಕಾರ್ಯಕ್ರಮ ನಿರೂಪಿಸಿದರು.

ಎರಡನೆಯ ಅಧಿವೇಶನವಾದ ಶಿವಾನುಭವಗೋಷ್ಠಿಯಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರ ವಜ್ರಮಹೋತ್ಸವ ಯೋಜನೆಗೆ ಉದಾರವಾಗಿ ದಾನ ಮಾಡಿದ ಅಭಿಮಾನಿ ಬಂಧುಗಳನ್ನು ನೆನಪಿನ ಕೊಡುಗೆಯಾಗಿ ಕೈಗಡಿಯಾರವನ್ನು ನೀಡಿ ಸನ್ಮಾನಿಸಲಾ-ಯಿತು. ಈ ಕಾರ್ಯಕ್ರಮವನ್ನು ವಜ್ರಮಹೋತ್ಸವದ ಕಾರ್ಯಾಧ್ಯಕ್ಷರಾದ ಮಾನ್ಯ ಶ್ರೀ ಬಿ. ಎಸ್. ಮುದ್ದಪ್ಪನವರು ನಡೆಸಿಕೊಟ್ಟರು.

'ಗುರುವಂದನ' ಸಮಾರಂಭ ಅರ್ಥಪೂರ್ಣವಾಗುವಂತೆ ಮುಂಬರುವ ವರ್ಷ ಗಳಲ್ಲಿ ವಿಚಾರವಂತರು ಸಲಹೆ ಸೂಚನೆಗಳನ್ನು ನೀಡಬೇಕೆಂದು 'ಸಿದ್ಧಗಂಗಾ' ನಮ್ರ ವಾಗಿ ವಿನಂತಿಸುತ್ತದೆ.

ಸಮಾರಂಭದ ಯಶಸ್ಸಿಗೆ ಸಹಕರಿಸಿದ ಸಮಸ್ತ ಬಂಧುಗಳಿಗೂ 'ಸಿದ್ಧಗಂಗಾ' ವಂದಿಸುತ್ತದೆ.



# ತುಮಕೂರು ಜಿಲ್ಲೆ ಸಾಹಿತ್ಯ-ಸಂಸ್ಕೃತಿ

❁ ಪ್ರೊ. ಜಿ. ಎಸ್, ಸಿದ್ಧಲಿಂಗಯ್ಯ,
ವಿಜಯನಗರ, ಬೆಂಗಳೂರು-40

ಈ ಜಿಲ್ಲೆಯ ನೈಸರ್ಗಿಕ ಸಂಪತ್ತು ಹಾಗೂ ಸಾಂಸ್ಕೃತಿಕ ಸಂಪತ್ತು ಅಪೂರ್ವ-ವಾದವು. ಸಿದ್ಧರಬೆಟ್ಟ, ದೇವರಾಯನದುರ್ಗ, ಸಿದ್ಧಗಂಗೆ, ಶಿವಗಂಗೆ, ಎಡೆಯೂರು, ಮಣ್ಣೆ, ಸೀಬಿ, ಗುಬ್ಬಿ ಇಂಥ ಹಲವಾರು ಕ್ಷೇತ್ರಗಳು ತಮ್ಮ ಸಾಂಸ್ಕೃತಿಕ ಮಹತ್ವ ಗಳಿಂದ ಇಂದಿಗೂ ಅಮೂಲ್ಯ ತೀರ್ಥಕ್ಷೇತ್ರಗಳಾಗಿವೆ. ಶೂನ್ಯ ಸಂಪಾದನೆಗಳ ಪರಿ ಷ್ಕರಣಗಳಿಗೆ ಕಾರಣವಾದ ಎಡೆಯೂರು-ಗೂಳೂರು ಕ್ಷೇತ್ರಗಳು ಸಾಹಿತ್ಯ ಹಾಗೂ ಮೀಮಾಂಸಕರಿಗೆ ಮಹತ್ವದ ಕೇಂದ್ರಗಳಾಗಿವೆ. ಮಧುಗಿರಿಯ ಏಕ ಶಿಲೆಯ ಬೆಟ್ಟ ವಾಗಲಿ, ಪಾವಗಡದ ಬಣ್ಣದ ಕಲ್ಲುಗಳಾಗಲಿ, ಇತಿಹಾಸ ಪ್ರಸಿದ್ಧವಾದವು. ಈ ಜಿಲ್ಲೆಯಲ್ಲಿ ಆಗಿ ಹೋದ ವಿದ್ವಾಂಸರು ಹಾಗೂ ಮಹನೀಯರು ಇಂದಿಗೂ ಪ್ರಾತಃಸ್ಮರ ಣೀಯರು. 'ಅಭಿನವಗುಪ್ತ ಎಂದೇ ಕರೆಯಬಹುದಾದ ತೀ.ನಂ.ಶ್ರೀ "ನಡೆದಾಡುವ ವಿಶ್ವ ಕೋಶ" ಡಿ.ಎಲ್.ಎನ್; 'ಹೊಸಗನ್ನಡದ ಕಣ್ವಮುನಿಗಳಾದ ಬಿ.ಎಂ.ಶ್ರೀ. 'ಗಣಿತದ ಪ್ರಾಧ್ಯಾಪಕರಾದರೂ ಕನ್ನಡದ ತೇಜಸ್ಸಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪ ನಾಟಕ ಚಳುವಳಿಗೆ ಚಾಲನೆ ನೀಡಿದ ಬೆಳ್ಳಾವೆ ನರಹರಿಶಾಸ್ತ್ರಿ; ರಂಗಕ್ರಾಂತಿ ಯನ್ನು ಉಂಟುಮಾಡಿದ ಗುಬ್ಬೀವೀರಣ್ಣ; ಮಹಾ ತಪಸ್ವಿಗಳೂ ತ್ರಿವಿಧ ದಾಸೋಹಿ ಗಳೂ ಆದ ಡಾ. ಶಿವಕುಮಾರ ಸ್ವಾಮೀಜಿ - ಹೀಗೆಯೇ ನೆನಪಿನ ಭಂಡಾರದ ಬಾಗಿಲು ತೆರೆದರೆ ಈ ಜಿಲ್ಲೆಯ ಮಹಾ ವ್ಯಕಿಗಳ ಚಿತ್ರಗಳು ಅರಳಿಕೊಳ್ಳುತ್ತವೆ. ಜೊತೆಗೆ ಹೆಮ್ಮೆಯೂ ಮೂಡುತ್ತದೆ. ಯಾತ್ರಿಕ ಮಾತುಗಾರಿಕೆಯ ಅಧ್ಯಾಪಕ ಶ್ರೇಷ್ಠ ರಾದ ಪ್ರೊ. ಕೆ. ವೆಂಕಟರಾಮಪ್ಪನವರಾಗಲಿ, ಎಂಥ ಸಭೆಯನ್ನಾಗಲಿ ತಮ್ಮ ಮಾತಿನ ಮೋಡಿಯಿಂದ ಸಮ್ಮೋಹನಗೊಳಿಸುತ್ತಿದ್ದ ತಾಳಕೆರೆ ಸುಬ್ರಹ್ಮಣ್ಯರಾಗಲಿ, ಸದಾ ಸ್ಮರಿ ಸಬೇಕಾದವರು. ವೀರಶೈವಾಮೃತ ಮಹಾಪುರಾಣ ರಚಿಸಿದ ಗುಬ್ಬಿಯ ಮಲ್ಲಣಾರ್ಯ, ಪ್ರಥಮ ಶೂನ್ಯಸಂಪಾದನೆಯ ಪರಿಷ್ಕರಣಕಾರನಾದ ಹಲಗೆಯಾರ್ಯ ೬-ಳನೆಯ

ಪರಿಷ್ಕರಣಗಳಿಗೆ ಕಾರಣಕರ್ತರಾದ ಅಭಿನವ ಅಲ್ಲಮನೆನಿಸಿದ ಎಡೆಯೂರು ಸಿದ್ಧಲಿಂಗ ಹಾಗೂ ಗೂಳೂರು ಸಿದ್ಧವೀರಣ್ಣ ಇವರೆಲ್ಲಾ ಕರ್ನಾಟಕದ ವ್ಯಾಪ್ತಿಯ ಮಹಾವ್ಯಕ್ತಿಗಳು. ಇಂಥ ಹೆಸರುಗಳ ಪಟ್ಟಿಯನ್ನು ನೀಡಿ ಜಿಲ್ಲೆಯ ಇತಿಹಾಸ ಬರೆಯುವುದು ನನ್ನ ಉದ್ದೇಶವಲ್ಲವಾದರೂ ಈ ತುಮಕೂರು ಜಿಲ್ಲೆ ಹೆಮ್ಮೆಪಡಬಹುದಾದ ಜಿಲ್ಲೆ ಎಂಬುದನ್ನು ನೆನಪಿಸಲು ಇಚ್ಛಿಸುತ್ತೇನೆ. ಗ್ರಾಮ ಜೀವನವೆಂದರೆ ಅಸಹ್ಯ ಪಟ್ಟುಕೊಳ್ಳುವಂತಹ ಈ ಜಿಲ್ಲೆಯ ಹೆಮ್ಮೆಯ ನೆನಪುಗಳಿಂದ ಹಿಗ್ಗುತ್ತಿರುವಂತೆಯೇ ಜಿಲ್ಲೆಯ ಕೈತಪ್ಪಿ ಹೋಗಿರುವ ಮಡಕಶಿರಾ ಮೊದಲಾದ ಕನ್ನಡ ಪ್ರದೇಶಗಳ ಕನ್ನಡಿಗರ ದುಸ್ಥಿತಿಯನ್ನು ಕುರಿತು ನೋವು ನನ್ನನ್ನೇ ಏನು ನಿಮ್ಮೆಲ್ಲರನ್ನೂ ಬಾಧಿಸುತ್ತಿದೆ ಎಂದು ತಿಳಿದಿದ್ದೇನೆ.

ಇದರ ಜೊತೆಗೆ ಕರ್ನಾಟಕದಿಂದ ಕೈತಪ್ಪಿ ಹೋಗಿರುವ ಎಲ್ಲ ಭಾಗಗಳ ನೆನಪೂ ಒತ್ತರಿಸಿ ಹೃದಯ ಭಾರವಾಗುತ್ತತೆ. ಕನ್ನಡಿಗರಾಗಿಯೂ ಕನ್ನಡ ನಾಡಿನ ಪ್ರವಾಹದೊಳಕ್ಕೆ ಸೇರಿಕೊಳ್ಳಲಾಗದಿರುವ ಕಾಸರಗೋಡು, ಸೊಲ್ಲಾಪುರ, ಅಕ್ಕಲಕೋಟೆ, ಮೊದಲಾದ ಪ್ರದೇಶಗಳ ಜನರನ್ನು ನಮ್ಮ ಕರ್ನಾಟಕದ ತೆಕ್ಕೆಗೆ ತರಲಾಗದಿರುವ ದುರ್ದೈವವನ್ನು ನೆನೆದು ದುಃಖವಾಗುತ್ತಿದ್ದಂತೆಯೇ ಈ ಬಗೆಗೆ ರಾಜಕಾರಣಿಗಳು ತಾಳಿರುವ ಧೋರಣೆಯನ್ನು ಕಂಡು ಆಕ್ರೋಶ ಕೂಡ ಹುಟ್ಟುತ್ತದೆ.

ಸಮ್ಮೇಳನ ಒಂದು ಸಾಂಸ್ಕೃತಿಕ ಹಬ್ಬ. ಸಂಸ್ಕೃತಿಗೆ ಸಂಬಂಧಿಸಿದವರೆಲ್ಲ ಒಂದು ಕಡೆ ಸೇರಿ ಸಾಂಸ್ಕೃತಿಕ ಕ್ರಿಯೆಯಲ್ಲಿ ಪಾಲ್ಗೊಳ್ಳುವ ಸಂತೋಷದ ಸಂದರ್ಭ. ಇಂಥ ಸಂದರ್ಭದಲ್ಲಿ ನಮ್ಮವರೇ ನಮ್ಮ ಜೊತೆಗಿಲ್ಲವಲ್ಲ ಎಂಬ ನೋವು ಮತ್ತೆ ಮತ್ತೆ ಕಾಡುತ್ತಿದೆ.

ನಮ್ಮನ್ನು ತೀವ್ರವಾಗಿ ಕಳವಳಕ್ಕೆ ಗುರಿಮಾಡಿರುವುದು ಮೌಲ್ಯಗಳೆಲ್ಲ ಕುಸಿದು ಬೀಳುತಿರ್ರುವ ನಮ್ಮ ಬದುಕಿನ ದುರಂತ ಚಿತ್ರ. ನಮ್ಮ ಮಾತಾಪಿತೃಗಳು ಇಂದು ಮಕ್ಕಳನ್ನು ಬರಿ ಇಂಜಿನಿಯರಿಂಗ್ ಅಥವಾ ವೈದ್ಯಕೀಯ ಶಿಕ್ಷಣಕ್ಕೆ ಸೇರಿಸಬಯಸುತ್ತಿರುವುದೇತಕ್ಕೆ? ಸುಲಭವಾಗಿ, ಶ್ರಮವಿಲ್ಲದೆಯೇ ದುಡ್ಡು ಮಾಡಲಿ, ಎಂದಲ್ಲವೆ? ಹೀಗೆ ದೊಡ್ಡವರೇ ದಾರಿ ತಪ್ಪಿದಾಗ ಮಕ್ಕಳಿಗೆ ದಾರಿ ತೋರಿಸುವವರು ಯಾರು? ಇವತ್ತು ಜನಕ್ಕೆ ಬೇಕಾಗಿರುವುದು ಸಾಹಿತ್ಯ ಅಲ್ಲ, ಶಿಲ್ಪ ಅಲ್ಲ ಸಂಗೀತ ಅಲ್ಲ ಚಿತ್ರ ಅಲ್ಲ ಯಾವುದೇ ಮೌಲ್ಯವೂ ಅಲ್ಲ, ಶ್ರಮವಿಲ್ಲದೇ ಬರುವ ದುಡ್ಡು; ಇಂದು ಏನು ಬೇಕಾದರೂ ಮಾಡಬಹುದಾದ ಅಧಿಕಾರ. ಇಂದು ದುಡ್ಡಿದ್ದವನು ದೊಡ್ಡಪ್ಪ, ಅಧಿಕಾರ ಇರುವವನು ಇವನಿಗೂ ದೊಡ್ಡವನಾದ ದೊಡ್ಡಪ್ಪ. ಹಣ ಮತ್ತು ಅಧಿಕಾರಗಳ ಬೆನ್ನುಬಿದ್ದರೆ ಸಮಾಜದ ಗತಿ ಆಗುವುದೆ ಹೀಗೆ. ಈಗಲಾದರೂ ನಾವು ಎಚ್ಚೆತ್ತುಕೊಳ್ಳಬೇಕು. ಮೌಲ್ಯದ ಕಡೆಗೆ ಮುಖ ಮಾಡುವ ಸಂಕಲ್ಪ ಮಾಡಬೇಕು.



ಈಗಿರುವ ಎಣ್ಣೆಯ ಬಾವಿಗಳಿ ಇನ್ನೂ ಹಲವು ದಶಕಗಳಲ್ಲಿ ಬರಿದಾಗಿಬಿಡಬಹುದು. ಲೋಹದ ಗಣಿಗಳು ಬರಿದಾಗಿ ಭೂಕಂಪದ ಕೇಂದ್ರಗಳಾಗಿಬಿಡಬಹುದು. ಕಾಡುಗಳೆಲ್ಲ ಹಾಳಾಗಿ ವಿಶ್ವವೇ ಒಂದು ದೊಡ್ಡ ಮರಳುಗಾಡಾಗಬಹುದು. ಈ ಭೀತಿ ನಮ್ಮನ್ನು ಏಕೆ ಕಾಡುತ್ತಿದೆಯೆಂದರೆ ನಾವೆಲ್ಲ ಈಗ ನವ-ನಾಗರಿಕರಾಗುತ್ತಿದ್ದೇವೆ. ಅತಿ ನಾಗರಿಕತೆ ಸಹಜ ಜೀವನದ ಸತ್ವಗಳನ್ನು ನಮಗರಿವಿಲ್ಲದಂತೆ ನಿಧಾನವಾಗಿ ನುಂಗಿಬಿಡುತ್ತದೆನ್ನುವುದನ್ನು ನಾವು ಮರೆತಿದ್ದೇವೆ. ಅಷ್ಟೇ ಅಲ್ಲ,ನವನಾಗರಿಕತೆ ಹೆಚ್ಚುವುದು ಎಂದರೆ ಹುಚ್ಚಾಸ್ಪತ್ರೆಗಳು ಹೆಚ್ಚಿಕೊಂಡಂತೆ. ಈ ಬಗ್ಗೆ ಎಷ್ಟು ಬೇಗ ನಾವು ಎಚ್ಚೆತ್ತುಕೊಂಡರೆ ಅಷ್ಟು ಒಳ್ಳೆಯದಾದೀತು.

ಪರಿಸರವಾದಿಗಳು ಒಂದು ತುದಿಯಲ್ಲಿ ನಿಂತು ವಿಮಾನಗಳಲ್ಲೇ ಪ್ರಯಾಣ ಮಾಡುತ್ತ ಪರಿಸರ ಸಂರಕ್ಷಣೆಯ ಮಾತನಾಡುತ್ತಿದ್ದಾರೆ. ನಾಗರಿಕತೆಗೆ ಅಂಟಿಕೊಂಡ ಜನ ನಗರದ ರಾತ್ರಿಗಳನ್ನು ಮೋಜಿನಿಂದ ಕಳೆಯಲು ಬಳಸುವ ವಿದ್ಯುತ್ತಿಗಾಗಿ ಜಲಾಶಯಗಳನ್ನು ಹಾಗು ವಿದ್ಯುತ್ ಘಟಕಗಳನ್ನು ನಿರ್ಮಿಸಲು ಯಾವ ಬಲಿ ಕೊಡುವುದಕ್ಕೂ ಸಿದ್ಧವಾಗಿ ನಿಂತಿದ್ದಾರೆ. ನಾಗರಿಕತೆಯ ದಾರಿಯಲ್ಲಿ ಬಹುದೂರ ನಡೆದು ಬಂದಿರುವ ನಾವು ಇಂದು ಅಪಾಯದ ಅಂಚನ್ನು ಮುಟ್ಟಿದ್ದೇವೆ. ಸರಿಯಾದ ತೀರ್ಮಾನ ನಮ್ಮದಾಗದಿದ್ದರೆ ಮುಂದಿನ ತಲೆಮಾರುಗಳ ಶಾಪ ನಮಗೆ ಕಟ್ಟಿಟ್ಟಬುತ್ತಿ.

ಪರಿಸರ ಕೆಟ್ಟಿದೆ ಎಂಬ ಮಾತನ್ನು ನಿಸರ್ಗಮಾತ್ರಕ್ಕೆ ಇಂದು ಅನ್ವಯಿಸಲಾಗುತ್ತಿಲ್ಲ, ನಮ್ಮ ಬದುಕಿನ ಹಾಗು ಕಲೆಗಳ ಪರಿಸರಗಳು ಮಲಿನವಾಗುತ್ತಿವೆ. ಬರೆದದ್ದು ಅಥವಾ ಕಲೆಯಾದದ್ದು ಯಾವ ಮಟ್ಟದ್ದು ಎಂಬುದಕ್ಕಿಂತ ಬರೆದವನು ಯಾರು? ಕಲಾವಿದ ಯಾರು? ಎಂದು ಗುಣವನ್ನು ಗ್ರಹಿಸುವಲ್ಲಿ ನಾವು ದಾರಿ ತಪ್ಪಿದ್ದೇವೆ. ಈ ಮಾತನ್ನು ಕೇಳಿದವರು ಪಂಪನ ಕಾಲದಲ್ಲಿ ರಾಜಕಾರಣವಿರಲಿಲ್ಲವೇ ಎಂದು ಪ್ರತಿಭಟಿಸಬಹುದು, ನಿಜ. ಆಗಲೂ ರಾಜಕೀಯ ಇತ್ತು. ಮಹಾಕವಿಯಾದ ಪಂಪ ಸಾಮಂತನೊಬ್ಬನ ಆಶ್ರಯದ ಕವಿಯಾದ್ದರಿಂದ ಚಕ್ರವರ್ತಿ ಆಗಲು ಸಾಧ್ಯವಾಗಲಿಲ್ಲ. ಚಕ್ರವರ್ತಿಯ ಆಶ್ರಯದಲ್ಲಿದ್ದ ಪೊನ್ನ ಚಕ್ರವರ್ತಿಯ ಪಟ್ಟಗಿಟ್ಟಿಸಿಯೇ ಬಿಟ್ಟ. ಇಂದು ಸಾಂಸ್ಕೃತಿಕ ಪರಿಸರದಲ್ಲಿ ಇಂಥದ್ದು ಆಗದಂತೆ ತಡೆಯಬಲ್ಲ ಸತ್‌ಸಂಕಲ್ಪ ಸರಿಯಾದ ಪ್ರತಿಭೆಯನ್ನು ಗುರುತಿಸುವ ಗುಣಗ್ರಾಹಕ ಶಕ್ತಿ ನಮ್ಮಲ್ಲಿ ಮೂಡಬೇಕು.

ನಮ್ಮಿಂದೇನಾದೀತು? ಇದು ಇಂದಿನ ಅಸಹಾಯ ಪರಿಸ್ಥಿತಿಯನ್ನು ಕಂಡಾಗ ಸಾಮಾನ್ಯವಾಗಿ ಆಡುವ ಮಾತಾಗಿ ಬಿಟ್ಟಿದೆ. ನಮ್ಮ ಕರ್ತವ್ಯವನ್ನು ನಿರ್ವಹಿಸುವಲ್ಲಿ ಹಾಗೂ ಅನ್ಯಾಯದೆದುರು ಪ್ರತಿಭಟನೆಯ ಸತ್ಯಾಗ್ರಹ ಮಾಡಬೇಕಾದ ಜವಾಬ್ದಾರಿಯನ್ನು ನಾವು ನಿರ್ವಹಿಸದಿದ್ದರೆ ಆಗುವ ಅನಾಹುತ ತೀರ ಭಯಾನಕವಾದದ್ದು. ನಿಮಗೆಲ್ಲ ಈ ಕಥೆ ಪರಿಚಿತ ಎಂದು ನಾನು ಭಾವಿಸಿದ್ದೇನೆ:

ಒಬ್ಬ ದೊರೆ ತನ್ನ ಪ್ರಜೆಗಳಿಗೆಲ್ಲ ಏರ್ಪಡಿಸಲಿರುವ ಔತಣಕ್ಕಾಗಿ ಒಂದು ದೊಡ್ಡ ಕಡಾಯಿಯನ್ನು ಊರಿನ ಅಗಸೆಯ ಬಾಗಿಲಿನ ಕಟ್ಟೆಯ ಮೇಲೆ ಇರಿಸಿದ. ನಾಳೆ ಬೆಳಗ್ಗೆ ನಡೆಯಲಿರುವ ಔತಣದ ಸಿದ್ಧತೆಗೆ ಎಲ್ಲ ಮನೆಯವರು ಒಂದೊಂದು ಮಿಳ್ಳೆ ಹಾಲನ್ನು ತಂದು ಹಾಕಬೇಕು ಎಂದು ಆದೇಶಿಸಿದ. ರಾಜಾಜ್ಞೆಯನ್ನು ಪಾಲಿಸದಿರುವುದು ಸಾಧ್ಯವೇ? ಹಾಗೆ ಮಾಡುತ್ತೇವೆ ಎಂದು ಮನೆಗೆ ಹೋದವರು ಒಬ್ಬೊಬ್ಬರೇ ಬಂದರು. ಇಡೀ ಊರಿನ ಜನ ಹಾಲು ಹಾಕುವಾಗ ನಾನೊಬ್ಬ ಒಂದು ಮಿಳ್ಳೆ ನೀರನ್ನು ಹಾಕಿದರೆ ಯಾರಿಗೆ ತಾನೆ ಪತ್ತೆಯಾದೀತು? ಎನ್ನುವ ಹುನ್ನಾರ ಒಬ್ಬನದು. ಒಬ್ಬ ಬಂದ; ಯಾರಿಗೂ ಕಾಣದಂತೆ ಮಿಳ್ಳೆಯನ್ನು ಮುಚ್ಚಿಕೊಂಡು ಹೋಗಿ ತೆರೆದ ಕಿಂಡಿಯಲ್ಲಿ ತನ್ನ ಪಾಲನ್ನು ಸುರಿದು ಬಂದ. ಹೀಗೆ ಒಬ್ಬರಾದ ಮೇಲೆ ಒಬ್ಬರು ಬಂದು ಹೋದರು. ಬೆಳಗಾದಾಗ ದೊರೆ ಎಲ್ಲರನ್ನು ಕರೆಯಿಸಿ ಅವರೆದುರಿಗೆ ಕಡಾಯಿಯ ಬಾಯಿ ತೆರೆಸಿ ನೋಡಿದ. ಅಲ್ಲೇನಿದೆ! ಬರೀ ನೀರು. ನಾನೊಬ್ಬನು ನೀರು ಹಾಕಿದರೇನು? ಮಿಕ್ಕವರು ಹಾಲು ಹಾಕುತ್ತಾರಲ್ಲ ಎಂಬ ನಂಬಿಕೆಯ ಮೇಲೆ ನಡೆದ ಕ್ರಿಯೆ ಅದು. ನಮ್ಮ ಪಾಲೆನ್ನುವುದು ಇಂಥ ಕೆಟ್ಟ ಹಾದಿ ಹಿಡಿಯಬಾರದು. ನಾವೇನು ಮಾಡಬಲ್ಲೆವು ಎಂದು ಕೈಚೆಲ್ಲಿ ಅಸಹಾಯಕರಂತೆ ಕುಳಿತುಕೊಳ್ಳುವುದು ಅಪಾಯಕಾರಿ ಯಾದದು;

ಇಲ್ಲಿ ಸಾಹಿತ್ಯವನ್ನು ಕುರಿತು ಯೋಚಿಸುವಾಗ ಒಂದು ಮುಖ್ಯ ವಿಚಾರವನ್ನು ನಾವು ಮರೆಯಬಾರದು ಒಂದು ವ್ಯಾಪಾರ ಮಾಡಬೇಕಾದರೆ ಬಂಡವಾಳ ಬೇಕು. ಸಾಹಿತ್ಯ ರಚನೆಗೆ ಮತ್ತೆ ಆಸ್ವಾದನೆಗೆ ಬಂಡವಾಳ ಬೇಡವೇ? ಅನುಭವದ ಬಂಡವಾಳ ಬೇಕು. ಸಾಹಿತ್ಯ ಪರಂಪರೆಯ ಬಂಡವಾಳ ಬೇಕು. ವ್ಯಾಪಾರಿಗೆ ತನ್ನ ವ್ಯಾಪಾರದಲ್ಲಿ ತನ್ನೆಲ್ಲ ಶಕ್ತಿಗಳನ್ನು ತೊಡಗಿಸುವಂತೆ, ಸಾಹಿತ್ಯ ರಚಿಸುವವನ ಎಲ್ಲ ಶಕ್ತಿಗಳನ್ನು ಇದಕ್ಕೆ ಮೀಸಲಾಗಬೇಕು. ಇಂಥ ಸಾಹಿತ್ಯ ರಚನೆಗೆ ಹೊರಡುವ ಸಾಹಿತಿಗೆ ಮೂಲ ಬಂಡವಾಳವಾಗಬೇಕಾದದ್ದು ಜೀವನದ ಪ್ರೀತಿ ಶುದ್ಧವಾದದ್ದಾಗಿರಬೇಕು. ಅಂತಾದಾಗ ಮಾತ್ರ ಒಳ್ಳೆಯ ಸಾಹಿತ್ಯದ ರಚನೆ ಸಾಧ್ಯವಾದೀತೋ ಏನೋ. ಒಂದು ಪಕ್ಷ ಅಂಥ ಸಾಹಿತ್ಯ ರಚನೆ ಮಾಡುವುದಕ್ಕೆ ಆಗಲಿಲ್ಲವೆಂದರೆ ವ್ಯಥೆ ಪಡಬೇಕಾದ ಅಗತ್ಯವೇನೂ ಇಲ್ಲ. ಕ್ರಿಸ್ತ, ಸಾಕ್ರೆಟಿಸ್' ಗಾಂಧಿ, ಮೊದಲಾದವರು ಸಾಹಿತಿಗಳಾಗಿರಲೇ ಇಲ್ಲ. ಹಾಗೆಂದ ಮಾತ್ರಕ್ಕೆ ಅವರೆಲ್ಲ ಗೌರವಾರ್ಹರಲ್ಲ ಎಂದೇನೂ ಅಲ್ಲ. ಬಹು ದೊಡ ಸಾಹಿತ್ಯ ಕೃತಿಯನ್ನು ರಚಿಸುವ ಸಾಹಿತಿ ಎಷ್ಟು ದೊಡ್ಡವನೋ ಒಂದು ದೊಡ್ಡ ಬದುಕನ್ನು ಬದುಕುವ ವ್ಯಕ್ತಿಯೂ ಅಷ್ಟೇ ದೊಡ್ಡವನು ಹಾಗೂ ಗೌರವಕ್ಕೆ ಅರ್ಹನಾದವನು. ಶಿಲ್ಪಿ, ಚಿತ್ರಗಾರ, ಸಂಗೀತಗಾರ, ಕವಿ ಅಥವಾ ಸಾಹಿತಿ ಅಥವಾ ದೊಡ್ಡ ಶೀಲದ ವ್ಯಕ್ತಿ ಅಥವಾ ದೊಡ್ಡ ವಿದ್ವಾಂಸ ಯಾವ ತ್ತಿಗೂ ಗೌರವಕ್ಕೆ ಅರ್ಹರಾದವರು ಎಲ್ಲಿಯವರೆಗೆ ದೇಶದ ಜನ ಇಂಥ ವಿದ್ವತ್ತನ್ನು,



ವ್ಯಕ್ತಿತ್ವವನ್ನು ಹಾಗೂ ಪ್ರತಿಭೆಯನ್ನು ಗೌರವಿಸುವುದಿಲ್ಲವೋ ಅಲ್ಲಿಯವರೆಗೆ ಆ ದೇಶ ಅನಾಗರಿಕ ಅನಿಸಿಕೊಳ್ಳುತ್ತದೆ. ಅಂಥ ದೇಶಗಳಲ್ಲಿ ಪಿಶಾಚಿಗಳು ಸಂಚರಿಸಲೂ ಹೆದರುತ್ತವೆ. ಏಕೆಂದರೆ, ಅಂಥ ಜನ ಪಿಶಾಚಿಗಳಿಗಿಂತ ನಿಕೃಷ್ಟರಾದವರು.

ನಾವು ನಮಗಿರುವ ಪಂಚೇಂದ್ರಿಯಗಳ ಸೂಕ್ಮತೆಯನ್ನು ಕಳೆದುಕೊಳುತ್ತಿದ್ದೇವೆ. ಔದ್ಯೋಗೀಕರಣದಿಂದ ಜನ ಬದುಕಿ ರೋಮಾಂಚಕತೆಯನ್ನೇ ಕಳೆದುಕೊಳ್ಳುತ್ತಿದ್ದಾರೆಂಬ ಡಿ.ಎಚ್. ಲಾರೆನ್ಸ್ ತೀವ್ರವಾಗಿ ಆತಂಕ ವ್ಯಕ್ತಪಡಿಸಿದ್ದ. ಲಾರೆನ್ಸ್ ಹೇಳಿದ ರೋಮಾಂಚಕತೆಗೆ ಕಾರಣವಾದದ್ದು ಸೂಕ್ಷ್ಮವಾದ ಸಂವೇದನೆ. ಇಂಥ ರೋಮಾಂಚಕತೆಯನ್ನು ಉಳಿಸಿಕೊಳ್ಳಬಲ್ಲ ಸೂಕ್ಷ್ಮ ಸಂವೇದನೆಯನ್ನು ಕುರಿತು ವರ್ಡ್ಸ್‌ವರ್ತ್‌ನ ಉಕ್ತಿಗಳು ಉಲ್ಲೇಖಾರ್ಹ :

My heart leaps up
When I behold a Rainbow in the sky
so was it, when 1 was a boy
so is it now I am a man
so be it, when 1 will be old or let me die.

ಕಾಮನ ಬಿಲ್ಲನ್ನು ಕಂಡ ಕವಿಯ ಹೃದಯ ತೆಕ್ಕನೆ ಮೈಮರೆಯುವುದಿಲ್ಲ; ಹೃದಯ ತಕಥೈ ಎಂದು ಆನಂದದಿಂದ ಕುಣಿದಾಡುತ್ತದಂತೆ. ಅಂಥ ರೋಮಾಂಚಕ ಶಕ್ತಿ ನನಗೆ ಬಾಲ್ಯದಲ್ಲಿತ್ತು; ಇಂದು ಯುವಕನಾಗಿದ್ದೇನೆ ಆ ರೋಮಾಂಚಕ ಶಕ್ತಿ ಹಾಗೆಯೇ ಇದೆ; ಮುಂದೆ ಮುಪ್ಪು ಬಂದಾಗ, ಆಗಲೂ ಇದೇ ರೋಮಾಂಚಕ ಶಕ್ತಿ ಹೀಗೆಯೇ ಇರಲಿ. ಒಂದು ಪಕ್ಷ ಆ ಶಕ್ತಿ ಇಲ್ಲದೇ ಹೋದರೆ ಅಂಥ ಬದುಕೇ ಬೇಡ; ಸಾಯುವುದು ಲೇಸು ಎನ್ನುತ್ತಾನೆ. ವರ್ಡ್ಸ್‌ವರ್ತ್ ಕವಿ. ಅಂಥ ಶಕ್ತಿ ಪಡೆದವರಿಗೆ ಅಂಥ ರೋಮಾಂಚಕತೆಯ ಅನುಭವದ ಹಿಗ್ಗು ಸಾಧ್ಯವಿರುತ್ತದೆ. ಉಳಿದವರಿಗೆ ಏನು ಗೊತ್ತು? ಅಂಥವರು ಮಾತನಾಡುತ್ತಾರೆ. ಅವರೆಲ್ಲ ಬಸವಣ್ಣ ಹೇಳುವ ಹಾಗೆ ನಡಿವ ಹೆಣಗಳು. ಅಂಥವರು ನಡೆದಾಡಿದರೆ ಅವರನ್ನು ನಡೆವ ಹೆಣಗಳು ಎನ್ನುತ್ತಾನೆ ಬಸವಣ್ಣ. ಹೀಗೆ ನುಡಿವ ಹೆಣ, ನಡೆವ ಹೆಣ, ಉಸಿರಾಡುವ ಹೆಣ ಆಗದೆ ಸಮೃದ್ಧ ಜೀವನವನ್ನು ಬದುಕಬೇಕಾದರೆ ಜೀವನವನ್ನು ಕುರಿತು ಇರುವ ಪ್ರೀತಿಯ ಜೊತೆಗೆ ಸೂಕ್ಷ್ಮ ಸಂವೇದನೆಯನ್ನು ಹಾಗೂ ರೋಮಾಂಚಕಥೆಯನ್ನು ಉಳಿಸಿಕೊಳ್ಳಬೇಕಲ್ಲವೆ?

'ಮಾನವ ಜನ್ಮ ದೊಡ್ಡದು' ಎಂದರು ಪುರಂದರದಾಸರು. ಈ ಮಾನವ ಜೀವನದ ಘನತೆ ಮತ್ತು ಸಾಧ್ಯತೆಗಳು ಅನಂತ. ಈ ಬದುಕು ಅದಮ್ಯಶಕ್ತಿ ಸಮುದಾಯ

ದಿಂದ ಕೂಡಿದ್ದು ಎಂಬುವು ಎಷ್ಟು ಮಂದಿಗೆ ಅರಿವಾಗಿದೆ ? ಮಳೆಗಾಲದಲ್ಲಿ ಕೃಷ್ಣ ರಾಜಸಾಗರದ ಅಣೆಕಟ್ಟೆಯ ಮೇಲಿನ ಹಾದಿಯಲ್ಲಿ ನೀವು ನಡೆದಾಡುತ್ತಿದ್ದರೆ ಜಲಾಶಯ ತುಂಬಿರುವ ಕಾರಣದಿಂದ ವಿಶ್ವೇಶ್ವರಯ್ಯ ನಾಲೆಯ ಬಾಗಿಲನ್ನೇನಾದರೂ ಸ್ವಲ್ಪ ತೆಗೆದಿದ್ದರೂ ಸಾಕು. ಅಲ್ಲಿಂದ ನುಗ್ಗುವ ನೀರಿನ ರಭಸಕ್ಕೆ ನೀರಿನ ತುಂತುರುಗಳು ಸಿಡಿದು ನಮ್ಮ ಮುಖಕ್ಕೆ ಅಪ್ಪಳಿಸುತ್ತವೆ. ಆ ತುಂತುರು ಹವಿಗಳು ಜಲಾಶಯದ ಒಂದು ತೂಬಿನ ಸಣ್ಣ ಕಿಂಡಿಯಲ್ಲಿ ನುಗ್ಗಿ ಬಂದ ನೀರಿನ ಪ್ರವಾಹದ ಕೆಲವು ತುಂತುರುಗಳು. ಈ ಮಾತಿನಿಂದ ವಿಷಯಾಂತರ ಮಾಡುತ್ತಿದ್ದೇನೆಂದು ಯಾರೂ ಭಾವಿಸಬಾರದು. ನಾವು ಕಾಣುವ ಹೋಮರ್, ವ್ಯಾಸ, ವಾಲ್ಮೀಕಿ, ಕಾಳಿದಾಸಾದಿಗಳು; ಕ್ರಿಸ್ತ, ಗಾಂಧಿಗಳು ಜೀವನ ಪ್ರವಾಹದ ಇಂಥ ಕೆಲ ತುಂತುರುಗಳು ಎಂಬುದನ್ನು ಮರೆಯದಿರೋಣ. ಈ ಬದುಕು ಎಷ್ಟು ದೊಡ್ಡದು ಎಂದರೆ ಅದು ವ್ಯಾಸನನ್ನು ಕಂಡರೆ ನಿನ್ನ ಯೋಗ್ಯತೆ ಇದ್ದಷ್ಟು ಬರೆದು ಹೋಗು ಎನ್ನುತ್ತದೆ. ವಾಲ್ಮೀಕಿ ಹೋಮರರಿಗೂ ಹಾಗೆಯೇ ಹೇಳುತ್ತದೆ. ನೂರು ಜನ ವ್ಯಾಸರು, ನೂರು ಜನ ವಾಲ್ಮೀಕಿಗಳು, ನೂರು ಜನ ಹೋಮರರು ಬಂದರೂ ಮುಗಿಯದಿರುವಂತಹದು ಈ ಜೀವನದ ಸತ್ವ. ಇದರ ಅನನ್ಯತೆ ಮತ್ತು ಅನಂತ ಸಾಧ್ಯತೆಗಳು ಎಂಥವು ಎಂಬುದು ಅರಿವಾಗಬೇಕಾದರೆ ಸೃಜನಾತ್ಮಕವಾಗಿ ಆಲೋಚಿಸುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕು.

ವ್ಯಾಸ ಸೃಷ್ಟಿಸಿದ ಅನೇಕ ಪಾತ್ರಗಳು ಜೀವಂತವಾದ ಪಾತ್ರಗಳೇ. ಅವುಗಳಲ್ಲಿ ಶಕುನಿ ಇದ್ದನಲ್ಲ ಅವನ ಪಾತ್ರದ್ದೇ ಒಂದು ವೈಶಿಷ್ಟ್ಯ. ಏಕೆಂದರೆ ಸರಸ್ವತಿಯ ಹಾಸ ಎಂದು ಪ್ರಸಿದ್ಧನಾದ ಭಾಸ ದುಷ್ಟ ಚತುಷ್ಟಯಗಳಲ್ಲಿ ಒಬ್ಬನೆನಿಸಿದ್ದ ದುರ್ಯೋಧನನ ಪಾತ್ರವನ್ನು ಉನ್ನತೀಕರಿಸಿದ. ಅವನದೇ ಆದ ಶೈಲಿಯಲ್ಲಿ ದುರ್ಯೋಧನನನ್ನು ರಿಪೇರಿ ಮಾಡಿದ ಎಂದು ಹೇಳಬಹುದು. ಎಷ್ಟರಮಟ್ಟಿಗೆ ಎಂದರೆ, ಅರ್ಧ ರಾಜ್ಯವನ್ನೇ ರೊಟ್ಟಿ ಮುರಿದು ಕೊಟ್ಟಂತೆ ಕೊಡಿಸಿಬಿಟ್ಟ, ಛಲದಂಕಮಲ್ಲನಾದ ದುರ್ಯೋಧನನಿಂದ ಪಾಂಡವರಿಗೆ ಗುರುದಕ್ಷಿಣೆಯ ರೂಪದಲ್ಲಿ. ಪಂಚರಾತ್ರವನ್ನು ಓದಿದವರಿಗೆ ಇದು ಪರಿಚಿತವೇ ಆದ ಸಂಗತಿ. ಅದೇ ಭಾಸ ಇದೇ ರೀತಿ ವಾಲ್ಮೀಕಿ ರಾಮಾಯಣದ ಮಂಥರೆಯ ಪಾತ್ರವನ್ನು ರಿಪೇರಿ ಮಾಡಿಬಿಟ್ಟ. ಆದರೆ ಆ ಶಕುನಿಯ ಪಾತ್ರ ! ಭಾಸನ ಕೈಯಲ್ಲೂ ಸಾಧ್ಯವಾಗಲಿಲ್ಲ. ಅಂಥ Irrepairable ಆದ ಪಾತ್ರ ಅದು. ಅಂದರೆ ಶಕುನಿಯ ಪಾತ್ರದ ರಹಸ್ಯಮಯತೆ ಹಾಗೂ ಶಕ್ತಿಗಳು ಅರಿವಾಗುತ್ತದೆ. ಆದರೆ ಇಂದಿನ ಪರಿಸ್ಥಿತಿ ಹೇಗಿದೆ ? ನೋಡಿ! ಇವತ್ತು ಅಂಥ ಶಕುನಿಗೆ ಟ್ಯೂಷನ್ ಕೊಡಬಲ್ಲಂತಹ ಕದೀಮರು ಇದ್ದಾರೆ. ದೆಹಲಿ, ಬೆಂಗಳೂರು ಮೊದಲಾದ ನಗರಗಳಲ್ಲಿ ಈಗ ಇವರದೇ ದರ್ಬಾರು. ಇವರ ಜಾಲಗಳು ಎಲ್ಲೆಲ್ಲಿ ಹರಡಿವೆಯೋ ಬಲ್ಲವರಾರು ? ಇಂಥ ಅನನ್ಯವಾದ ಬದುಕಿನ ಶಕ್ತಿಗಳನ್ನು ಕಂಡರೆ



ದಿಗಿಲಾದಂತೆಯೇ ಇಂಥವರ ಮಧ್ಯದಲ್ಲೂ ಬದುಕಬಲ್ಲಂಥ ಅಷ್ಟೇ ಏಕೆ ಹಲವಾರು ಸಲ ಗೆಲ್ಲಬಲ್ಲಂಥ ಧೀಮಂತರು, ಸಾತ್ವಿಕರು ಇರುವುದು ಬದುಕಿಗೊಂದು ನೆಮ್ಮದಿಯ ವಿಷಯ.

ತುಮಕೂರು ಜಿಲ್ಲೆಯಲ್ಲಿ ಶಿಕ್ಷಣದ ಸಂಸ್ಥೆಗಳು ಹುಟ್ಟಿಕೊಂಡಿವೆ, ಗ್ರಾಮಾಂತರ ಪ್ರದೇಶಗಳಲ್ಲಿ ಈ ಶಿಕ್ಷಣ ಸಂಸ್ಥೆಗಳು ಮಹತ್ವದ ಕೆಲಸವನ್ನು ಮಾಡುತ್ತಿವೆ. ಈ ಹೆಮ್ಮೆಯ ಮಾತನ್ನು ಆಡುತ್ತಿರುವಂತೆಯೇ ಶಿಕ್ಷಣವು ವ್ಯಾಪಾರವಾಗುತ್ತಿದೆಯಲ್ಲ ಎಂಬ ದೂರು ಈಗೀಗ ಕೇಳಬರತೊಡಗಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಮತ್ತೆ ಮೈಸೂರು ರಾಜ್ಯ ತನ್ನ ಪ್ರಜಾತಂತ್ರವನ್ನು ಪಡೆಯುವಲ್ಲಿ ಬಲಿದಾನವನಿತ್ತದ್ದೂ ನಮ್ಮ ಜಿಲ್ಲೆ. ಮಹಾನಾಯಕರನ್ನು ಪಡೆದದ್ದು ಈ ಜಿಲ್ಲೆ. ಇಂದು ಈ ಜಿಲ್ಲೆಯಲ್ಲಿ ನಾಡಿನ ಗಮನವನ್ನು ಸೆಳೆಯಬಲ್ಲ ನಾಯಕತ್ವದ ದನಿ ಕಾಣುತ್ತಿಲ್ಲ. ಆ ಪಕ್ಷ ಈ ಪಕ್ಷ ಎಂದು ಜಿಲ್ಲೆಯ ಬದುಕು ರಾಜಕೀಯವಾಗಿ ಚಿಂದಿಚಿಂದಿಯಾಗಿ ಹೋಗಿದೆ. ಹೀಗಾಗದಿದ್ದರೆ ಈ ಜಿಲ್ಲೆಗೆ ನೀರಿನ ಸಮಸ್ಯೆಯಿಂದ ಬಾಯಾರುವಂತಾಗುತ್ತಿರಲಿಲ್ಲ. ಇಂದಾದರೂ ರಾಜಕೀಯಕ್ಕಿಳಿದವರು ಕೀಳು ರಾಜಕಾರಣವನ್ನು ಬಿಟ್ಟು ದೇಶವನ್ನು ಕಟ್ಟುವ ಈ ಹಂತದಲ್ಲಿ ಮೊದಲು ಜಿಲ್ಲೆಯ ಸಮಸ್ಯೆಗಳನ್ನು ಬಗೆಹರಿಸುವ ಹಾದಿಯಲ್ಲಿ ಮುನ್ನಡೆಯಬೇಕಾಗಿದೆ. ತುಮಕೂರು ಮತ್ತಿತರ ಊರುಗಳು ಬೆಳೆಯುತ್ತಿವೆಯೆಂದು ಹಿಗ್ಗುತ್ತಿರುವುದರ ಜೊತೆಗೆ ಇಲ್ಲಿದ್ದ ಕೆರೆಗಳು ಬತ್ತುತ್ತಿರುವುದನ್ನು ತಪ್ಪಿಸಬೇಕಾಗಿದೆ. ಇಲ್ಲದಿದ್ದರೆ ಅಂತರ್ ಜಲ ಬತ್ತಿ ನಗರಗಳು ಮರುಭೂಮಿಗಳಾಗುತ್ತವೆ. ಕೈಗಾರಿಕೆಗಳ ಹೆಸರುಗಳಲ್ಲಿ ಗ್ರಾಮ ಜೀವನದ ನೆಮ್ಮದಿಯನ್ನು ಹಾಗೂ ಗೃಹ ಕೈಗಾರಿಕೆಗಳನ್ನು ಹಾಳುಗೆಡವಲಾಗುತ್ತಿದೆ. ಇದು ನಿಲ್ಲಬೇಕು. ತುಮಕೂರು ಜಿಲ್ಲೆಯ ಶಿಕ್ಷಣ ಸಂಸ್ಥೆಗಳ ಬಾಹುಳ್ಯ ವೈವಿಧ್ಯಗಳನ್ನು ಗಮನಿಸಿದರೆ ಇದೊಂದು ವಿಶ್ವವಿದ್ಯಾಲಯದ ಕೇಂದ್ರವಾಗುವ ಯೋಗ್ಯತೆಯನ್ನು ಪಡೆಯುತ್ತಿದೆ ಎಂದರ್ಥ. ಈ ದಿಶೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರವೊಂದು ತುಮಕೂರಿನಲ್ಲಿ ಆರಂಭವಾಗಿರುವುದು ಒಂದು ಶುಭ ಸೂಚನೆ ಎಂದು ಭಾವಿಸುತ್ತೇನೆ.

ಯಾವುದೇ ಒಂದು ಪ್ರದೇಶ ಆರ್ಥಿಕವಾಗಿ ಎಷ್ಟೇ ಮುಂದುವರಿದರೂ ಸಾಂಸ್ಕೃತಿಕವಾಗಿ ಸಮೃದ್ಧವಾಗದೇ ಹೋದರೆ ಜನರ ಬದುಕು ಟೊಳ್ಳಾಗುತ್ತದೆ. ಆದ್ದರಿಂದಲೇ ಜನ ತಮ್ಮ ದೈನಂದಿನ ಬದುಕಿನ ಜೊತೆಗೆ ಕಲೆ ಮತ್ತು ಸಂಸ್ಕೃತಿಯ ಚಟುವಟಿಕೆಗಳನ್ನು ಬೆಳೆಸಿಕೊಳ್ಳಬೇಕು. ನಮ್ಮ ಬದುಕು ಹಿಂದಿನವರ ಬದುಕಿನಂತೆ ಕಲಾತ್ಮಕತೆಯನ್ನು ಹೊಟ್ಟೆಯಲ್ಲಿಟ್ಟುಕೊಂಡೇ ಬೆಳೆಯುವ ಬದುಕಲ್ಲ. ನಮ್ಮದು ನಗರ

ಮುಖವಾಗಿರುವ ವೇಗದ ಜೀವನ. ಹಿಂದಾದರೆ ರಾಗಿ ಬೀಸುವಾಗ, ಭತ್ತ ಕುಟ್ಟುವಾಗ, ಕಳೆ ಕೀಳುವಾಗ ಹಾಡುತ್ತಿದ್ದ ಹಾಡುಗಳು ಕೇವಲ ಹಿಂದಿನ ಹಾಡುಗಳಷ್ಟೇ ಅಲ್ಲ. ಅಂಥ ಸಂದರ್ಭಗಳಲ್ಲಿ (ತಮ್ಮ ಅನುಭವವೇ ಸ್ಫೂರ್ತಿಯಾಗಿ) ಹೊಸದಾಗಿ ಹುಟ್ಟಿಕೊಂಡ ಅನೇಕ ಜನಪದ ಗೀತೆಗಳಿರುತ್ತಿದ್ದವು. ಉತ್ಸವಾದಿಗಳಲ್ಲಿ ಡೊಳ್ಳಿನ ಕುಣಿತ ಮತ್ತು ಹಾಡುಗಳು ಹಾಗೂ ಕೋಲಾಟದ ಪದಗಳು ಜೀವ ತುಂಬುತ್ತಿದ್ದವು. ರೇಡಿಯೋ, ದೂರದರ್ಶನಗಳಿಗೆ ಮಾರಿಕೊಂಡಿರುವ ನಾವು ಕಲೆಯ ಕರುಳುಬಳ್ಳಿಯನ್ನು ಕತ್ತರಿಸಿಕೊಂಡು ತಬ್ಬಲಿ ಶಿಶುಗಳಂತಾಗಿದ್ದೇವೆ ಅಂಥ ಕಲೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ನಮ್ಮನ್ನು ತೊಡಗಿಸಿಕೊಳ್ಳದಿದ್ದರೆ ಬದುಕು ಟೊಳ್ಳಾಗುತ್ತದೆ.

ಕರ್ನಾಟಕ ನಿಸರ್ಗಶ್ರೀಯಿಂದ ಸಂಪನ್ನವಾದ ದೇಶ. ಇಲ್ಲಿಯ ಜನರೂ ಪ್ರತಿಭಾವಂತರೇ. ಅದಕ್ಕೆ ಉದಾಹರಣೆಯೆಂದರೆ ಭಾರತದ ಶ್ರೇಷ್ಠ ಸಾಹಿತ್ಯ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯನ್ನು ಕನ್ನಡಿಗರು ಆರು ಸಲ ಪಡೆದಿರುವುದು ಇದು ಆಕಸ್ಮಿಕವಲ್ಲ. ಭಾರತದ ಶ್ರೇಷ್ಠ ಸಂಗೀತಗಾರರಿಗೆ ದೊರಕುವ ಕಾಳಿದಾಸ ಸಂಮ್ಮಾನ್ ಮೂವರು ಕನ್ನಡಿಗರಿಗೆ ಸಂದಾಯವಾಗಿದೆ. ಭಾರತದ ಶ್ರೇಷ್ಠ ಕವಿಗೆ ಕೊಡಬೇಕೆಂದು ಆರಂಭಿಸಿದ ಪ್ರಥಮ ಕಬೀರ್ ಸಂಮ್ಮಾನ್ ದೊರಕಿದ್ದು ಕನ್ನಡಕ್ಕೆ-ಗೋಪಾಲಕೃಷ್ಣ ಅಡಿಗರಿಗೆ. ಕಲ್ಕತ್ತದ ಭಾಷಾ ಪರಿಷತ್ತು ರೂಪಿಸಿದ ಬಿಲ್ವಾರ ಪ್ರಶಸ್ತಿ ಪ್ರಥಮ ಬಾರಿಗೆ ಸಂದದ್ದು- ಕನ್ನಡಿಗನಿಗೆ- ಡಾ|| ಸಿದ್ಧಯ್ಯ ಪುರಾಣಿಕರಿಗೆ ಇಬ್ಬರು ಕನ್ನಡಿಗರು ಅಂತರರಾಷ್ಟ್ರೀಯ ಮ್ಯಾಗ್ಸೇಸ್ ಪ್ರಶಸ್ತಿ ಪಡೆದವರಿದ್ದಾರೆ. ಹೀಗೆಯೇ ಈ ಪಟ್ಟಿಯನ್ನು ಮುಂದುವರಿಸುವುದು ನನ್ನ ಉದ್ದೇಶವಲ್ಲ.

ಶ್ರೇಷ್ಠ ವಿಜ್ಞಾನಿಗಳೂ, ಕಲಾವಿದರೂ, ಪ್ರತಿಭಾವಂತರೂ ಇರುವ ಕನ್ನಡಿಗರ ಸ್ಥಿತಿ ಇಂದು ಏನಾಗಿದೆ ? ಅರಬ್ಬನೂ ಮತ್ತು ಒಂಟೆಯೂ ಕಥೆಯಾದ ಹಾಗೆಯೇ ಇದೆ. ಮರುಳುಗಾಡಿನಲ್ಲೆಲ್ಲ ತನ್ನನ್ನು ಹೊತ್ತು ಸಂರಕ್ಷಿಸುವ ಒಂಟೆಗೂ ವಿಶ್ರಮಿಸಿಕೊಳ್ಳಲು ಒಂದಿಷ್ಟು ನೆರಳಿರಲಿ ಎಂದು ಅರಬ್ಬನು ಕರುಣೆಯಿಂದ ತನ್ನ ಡೇರೆಯ ನೆರಳಲ್ಲಿ ಒಂಟೆಯ ತಲೆಯನ್ನಿರಿಸಿ ಮಲಗಿಕೊಂಡ ಹಾಯಾದ ನೆರಳಿಗೆ ಹಿಗ್ಗಿದ ಒಂಟೆ ಇಷ್ಟಿಷ್ಟು ಒಳ ನುಗ್ಗುತ್ತ ಕೊನೆಗೆ ಒಳಗೆ ಮಲಗಿದ್ದ ಅರಬ್ಬನನ್ನು ಹೊರಕ್ಕೆ ದಬ್ಬಿ ತಾನು ಒಳಗೆ ತಣ್ಣಗೆ ಮಲಗಿತಂತೆ. ಕನ್ನಡಿಗರ ಸ್ಥಿತಿಯೂ ಅಂಥ ಅರಬ್ಬನ ಸ್ಥಿತಿಯಂತೆಯೇ ಆಗಿದೆ. ಸಮೃದ್ಧವಾಗಿರುವ ಕರ್ನಾಟಕಕ್ಕೆ ವಲಸೆ ಬರುತ್ತಿರುವ ಜನರು ಬೆಂಗಳೂರಿನಂಥ ಪ್ರದೇಶಗಳಲ್ಲಿ ಕನ್ನಡಿಗರ ನಿದ್ರೆಯನ್ನು ಹಾಳುಗೆಡಹುತ್ತಿದ್ದಾರೆ. ಇದಕ್ಕೆ ಪರಿಹಾರ ಸೂಚಿಸುವುದು ಹೇಗೆಂಬ ಬಗ್ಗೆ ಸರ್ಕಾರಗಳು ನಿಶ್ಚಿತ ಧೋರಣೆಯನ್ನು ಅಪಾಯದ ಗಂಟೆ ಮೊಳಗುವುದಕ್ಕೆ ಮೊದಲೇ ತಾಳಬೇಕಾಗಿದೆ.



ಒಂದು ಕಾಲಕ್ಕೆ ನಾವು ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣದಲ್ಲೂ ಕನ್ನಡ ಮಾಧ್ಯಮ ಜಾರಿಗೆ ಬರಬೇಕೆಂದು ಹೋರಾಡುವ ಸ್ಥಿತಿಯಲ್ಲಿದ್ದೆವು. ನಮ್ಮ ಇಂದಿನ ಸ್ಥಿತಿ ಕರುಣಾಜನಕವಾಗಿದೆ. ನಾಲ್ಕನೆಯ ತರಗತಿಯವರೆಗೆ ಶಿಕ್ಷಣ ಮಾತೃಭಾಷೆಯಲ್ಲಿ ನಡೆಯಬೇಕು; ಒಂದು ಪಕ್ಷ ಮಾತೃಭಾಷೆಯ ವಿದ್ಯಾರ್ಥಿಗಳ ಸಂಖ್ಯೆ ಅಗತ್ಯವಾದದ್ದಕ್ಕಿಂತ ಕಡಿಮೆ ಇದ್ದರೆ ಕರ್ನಾಟಕದ ಆಡಳಿತ ಭಾಷೆಯಾದ ಕನ್ನಡದಲ್ಲೇ ನಡೆಯಬೇಕೆಂದು ಹೋರಾಡುವ ನಗೆಪಾಟಲಿನ ಸ್ಥಿತಿಗೆ ಬಂದಿದ್ದೇವೆ. ಶಿಕ್ಷಣತಜ್ಞರು ಮಾತೃಭಾಷೆಯಲ್ಲೇ ಮಕ್ಕಳಿಗೆ ಶಿಕ್ಷಣವಾಗಬೇಕೆಂದು ಒಕ್ಕೊರಲಿನಿಂದ ಸಾರಿದ್ದಾರೆ. ಭಾರತದ ಸರ್ವೋಚ್ಚ ನ್ಯಾಯಾಲಯವು ಇದನ್ನು ಎತ್ತಿಹಿಡಿದಿದೆ. ಹಾಸ್ಯಾಸ್ಪದವಾದ ಸಂಗತಿಯೆಂದರೆ ಇಂದು ಪ್ರಾಥಮಿಕ ಶಿಕ್ಷಣ ಕನ್ನಡದಲ್ಲೇ (ಮಾತೃಭಾಷೆಯಲ್ಲೇ) ಆಗಬೇಕೆಂಬ ಸರ್ಕಾರದ ಆದೇಶವನ್ನು ಕೋರ್ಟಿನ ಕಟ್ಟೆಗೆ ಒಯ್ದಿದ್ದಾರೆ. ಹಾಗೆ ಒಯ್ದಿರುವವರು ಬ್ರಿಟಿಷರೋ, ಆಫ್ರಿಕನ್ನರೋ ಅಥವಾ ಅಮೆರಿಕನ್ನರೋ ಅಲ್ಲ; ಶಿಕ್ಷಣವನ್ನು ವ್ಯಾಪಾರವಾಗಿ ಮಾಡಿಕೊಂಡಿರುವ ಕನ್ನಡದಜನರೇ. ಅಲ್ಪಸಂಖ್ಯಾತರೆಂಬ ನೆಪಬೇರೆ. ಸ್ವಲಾಭಕ್ಕಾಗಿ ಮಕ್ಕಳ ಭವಿಷ್ಯವನ್ನಾಗಲಿ, ದೇಶದ ಭವಿಷ್ಯವನ್ನಾಗಲಿ ಗಮನಕ್ಕೆ ತಂದುಕೊಳ್ಳದ ಇಂಥ ದುಷ್ಟರಿರುವ ನಮ್ಮ ದುರ್ದೈವವನ್ನು ಹಳಿದುಕೊಳ್ಳುತ್ತ ಕೂರಬೇಕೇ ? ಡಾ|| ಸಿದ್ಧಯ್ಯ ಪುರಾಣಿಕರು ಕನ್ನಡದ ಇಂದಿನ ಮೂರು ಸಮಸ್ಯೆಗಳನ್ನು ಕುರಿತು ಅವಕ್ಕೆ ಮೂರು ಕಾರಣಗಳನ್ನು ಸೂಚಿಸಿದ್ದರು.

1. ಕನ್ನಡಿಗರ ಅಭಿಮಾನ ಶೂನ್ಯತೆ 2. ರಾಜಕಾರಣಿಗಳ ತೀವ್ರ ನಿಷ್ಕ್ರಿಯತೆ ಮತ್ತು
3. ಅನ್ಯಭಾಷಿಕರ ಆಕ್ರಮಣಶೀಲತೆ

ನಮ್ಮ ಭವಿಷ್ಯಕ್ಕಾಗಿಯಾದರೂ ನಮ್ಮ ಜವಾಬ್ದಾರಿಯನ್ನು ನಾವು ಅರಿತುಕೊಳ್ಳಬೇಕಾಗಿದೆ. ಕುವೆಂಪು ಅವರು ಸತ್ತಂತಿಹರನ್ನು ಬಡಿದೆಚ್ಚರಿಸು ಎಂದದ್ದು ಎಷ್ಟೊಂದು ಉಚಿತವಾಗಿದೆ ! ಮಲಗಿರುವವರನ್ನು ಎಚ್ಚರಗೊಳಿಸಬಹುದು. ಆದರೆ ಮಲಗಿರುವಂತೆ ನಟಿಸುವವರನ್ನು ಎಚ್ಚರಿಸುವುದು ಸಾಧ್ಯವೆ? ಕನ್ನಡಿಗ ಈಗ ಮಲಗಿದಂತಲ್ಲ; ಸತ್ತಂತೆ ಇದ್ದಾನೆ-ಅದಕ್ಕೆ ಕುವೆಂಪು ಹಾಗೆ ಹೇಳಿದ್ದು. ಕನ್ನಡಿಗ ಇಂದು ನಿರಭಿಮಾನದ ನಿದ್ದೆಯಿಂದ ಏಳಬೇಕು ತಮ್ಮ ಜವಾಬ್ದಾರಿಯರಿತು ಮುನ್ನಡೆಯಬೇಕು. ನಿಷ್ಕ್ರಿಯರಾದ ರಾಜಕಾರಣಿಗಳನ್ನು ಕ್ರಿಯಾಶೀಲರನ್ನಾಗಿ ಮಾಡಬೇಕಾಗಿದೆ. ಅಷ್ಟೇ ಅಲ್ಲ, ಅನ್ಯಭಾಷಿಕರ ಆಕ್ರಮಣಶೀಲತೆಗೆ ಇನ್ನಾದರೂ ತಡೆಯೊಡ್ಡಬೇಕಾಗಿದೆ. ಅಂಥ ದಿನಗಳು ಬರಲಿ, ಅದಕ್ಕಾಗಿ ನಾವೆಲ್ಲ ಶ್ರಮಿಸೋಣ.

ಈ ಜಿಲ್ಲೆಯ ಜನ ಒಂದು ಮಾತನ್ನು ಮನದಟ್ಟು ಮಾಡಿಕೊಳ್ಳಬೇಕು. ತುಮಕೂರು ಜಿಲ್ಲೆ ಬೆಳೆದರೆ ನಾನು ಬೆಳೆಯುತ್ತೇನೆ. ಆದ್ದರಿಂದ ತುಮಕೂರಿನ ಆರ್ಥಿಕ ಸಾಂಸ್ಕೃತಿಕದ ಸಂವರ್ಧನೆಗೆ ನಾನು ಶ್ರಮಿಸುತ್ತೇನೆ ಎಂದು ದೀಕ್ಷೆ ಕೈಗೊಳ್ಳಬೇಕಾಗಿದೆ.

# ಸಿದ್ಧರಾಮನ ಕೆಲವು ವಚನಗಳು

ಸಿ. ಎಸ್. ಶಿವಕುಮಾರಸ್ವಾಮಿ, ಉಪನ್ಯಾಸಕರು, "ಕನ್ನಡ ಭಾರತಿ" ಕುವೆಂಪು ವಿಶ್ವವಿದ್ಯಾನಿಲಯ, ಬಿ. ಆರ್. ಪ್ರಾಜೆಕ್ಟ್–577115 ಶಿವಮೊಗ್ಗ ಜಿಲ್ಲೆ.

---

ಭಕ್ತನ ಮನ ಹೆಣ್ಣಿನೊಳಗಾದಡೆ,
ವಿವಾಹವಾಗಿ ಕೂಡುವುದು.
ಭಕ್ತನ ಮನ ಮಣ್ಣಿನೊಳಗಾದಡೆ,
ಕೊಂಡು ಆಲಯವ ಮಾಡುವುದು.
ಭಕ್ತನ ಮನ ಹೊನ್ನಿನೊಳಗಾದಡೆ,
ಬಳಲಿ ದೊರಳಿಸುವುದು ನೋಡಾ,
ಕಪಿಲ ಸಿದ್ಧ ಮಲ್ಲಿಕಾರ್ಜುನಾ.

ಇಲ್ಲಿ ಭಕ್ತನನ್ನು ಕಾಡುವ ಮೂರು ವಸ್ತುಗಳಿವೆ: **ಹೆಣ್ಣು, ಮಣ್ಣು, ಹೊನ್ನು.** ಇವು ಆತನ 'ಮನ'ವನ್ನು ವಿಷಯ ಸುಖದ ಕಡೆ ಸೆಳೆಯುವ; ಇಂದ್ರಿಯಾಸಕ್ತವಾಗಿ ಮಾಡುವ ಲೌಕಿಕ ಆಕರ್ಷಣೆಗಳು. ಇದಿಷ್ಟು ಅರ್ಥವನ್ನು ಮಾತ್ರ ಇವುಗಳಿಗೆ ಆರೋಪಿಸಿದರೆ ಮೇಲಿನ ಮೂರು ವಸ್ತುಗಳು "ಮಾಯೆ" ಎನಿಸಿಕೊಳ್ಳುತ್ತವೆ. ಆದರೆ, ವಚನಕಾರರ ನಿಲುವೇ ಬೇರೆ. **ಮಾಯೆ ಎನ್ನುವುದು ವಸ್ತುವಿನಲ್ಲಿರುವುದಲ್ಲ; ಅದು ದೃಷ್ಟಿಯಿಂದ ಉಂಟಾಗುವ ದೋಷ.** "ಮನದ ಮುಂದಣ ಆಶೆಯೇ ಮಾಯೆ ಕಾಣಾ" ಎಂದಿದ್ದಾನೆ ಅಲ್ಲಮಪ್ರಭು.

ಲೌಕಿಕ ಸೆಳೆತಗಳಿಂದ ಯಾರೂ ಮುಕ್ತರಾದವರಲ್ಲ. ಸಾಧಕ ಕೂಡ ತನ್ನ ಪ್ರವೃತ್ತಿಗಳನ್ನು ಸಂಪೂರ್ಣವಾಗಿ ಹತ್ತಿಕ್ಕಲಾರದೆ, ಇಂದ್ರಿಯಗಳನ್ನು ತೃಪ್ತಿಪಡಿಸಲು ಹವಣಿಸುತ್ತಾನೆ. ಅವುಗಳನ್ನು 'ಅರಿ'ಗೆ ಕೊಂಡೊಯ್ಯದೆ ಹತೋಟಿಯಲ್ಲಿರಿಸಿ ಕೊಂಡು ಗೆಲ್ಲುವ ಪ್ರಯತ್ನ ಮಾಡುತ್ತಾನೆ. ಆದ್ದರಿಂದ, ಹೆಣ್ಣು-ಹೊನ್ನು-ಮಣ್ಣು ಇವುಗಳನ್ನು "ಕೂಡುವುದು, ಮಾಡುವುದು, ದೊರಕಿಸುವುದು" ಆತನ ಮನೋಧರ್ಮಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಭಕ್ತ ಈ ವಸ್ತುಗಳಿಗೆ "ಒಳಗಾದಡೆ" ನೀತಿಬದ್ಧವಾಗಿ, ಧರ್ಮ ಸಮ್ಮತವಾಗಿ ಅವುಗಳನ್ನು ಒಪ್ಪಿಕೊಳ್ಳಬೇಕು. ಆಗ ಭಕ್ತ ಅನುಭವಿಸುವ ಸುಖಕ್ಕೆ ಒಂದು ಮಿತಿ ಏರ್ಪಡುತ್ತದೆ. ಒಳಗಾದ ಹೆಣ್ಣಿನೊಡನೆ ಕೂಡುವುದಕ್ಕಿಂತ ವಿವಾಹವಾಗಿ ಕೂಡುವ, ದೊರೆತ ಮಣ್ಣಲ್ಲಿ ಆಲಯವನ್ನು ಮಾಡುವ, ಹೊನ್ನನ್ನು ಬಳಲಿ ದೊರಕಿಸಿಕೊಳ್ಳು ಪ್ರಯತ್ನ ಮಾಡಬೇಕು. ವಚನದಲ್ಲಿ ಪುನರಾವರ್ತಿತವಾಗಿರುವ "ಒಳಗಾದಡೆ" ಎಂಬ ಶಬ್ದಕೂಡ ಇದನ್ನೇ ಧ್ವನಿಸುತ್ತದೆ. ಅಂದರೆ ಕಾಣುವ ವಸ್ತುವನ್ನು ನಿರ್ವಿಕಾರವಾಗಿ ನೋಡಬೇಕೆಂಬುದೆ ಇದರ ಅರ್ಥ.



ಮೂರಳಿದು ಮೂರಳವಟ್ಟುದೆ ಭಕ್ತಸ್ಥಲ
ಮೂರಳಿದು ಮೂರಳವಟ್ಟುದೆ ಜಂಗಮಸ್ಥಲ
ಅಳಿದು ಎಂದಡೆ,
ಇದ್ದ ಮನ ಲಿಂಗಕ್ಕೆ ಕೊಟ್ಟಾಗಳೆ ಹೆಣ್ಣಳಿದುದು;
ಇದ್ದ ಧನ ಜಂಗಮಕ್ಕೆ ಕೊಟ್ಟಾಗಳೆ ಹೊನ್ನಳಿದದು
ಇದ್ದ ತನು ಗುರುವಿಂಗೆ ಕೊಟ್ಟಾಗಳೆ ಮಣ್ಣಳಿದುದು
ಅವರವರಾಚರಣೆಯ ನೋಡಿ ಕೊಡುವುದಲ್ಲದೆ,
ಬೇಡಿದ ಪರಿಯಲ್ಲಿ ಕೊಡುವುದೇನೋ ಅಯ್ಯಾ ?
ಸಿಂಧು ಬಲ್ಲಾಳ ತನ್ನ ವಧುವ ಕೊಟ್ಟನೆಂದು ಹೇಳಿದಲ್ಲಿ,
ತನ್ನ ಹೆಂಡತಿಯನೇನಾದಡೂ ಕೊಟ್ಟಾನೆ ? ಇಲ್ಲಿಲ್ಲ
ಹೆಣ್ಣು ಎಂದಡೆ ತಾನು, ಶರಣಸತಿ ಲಿಂಗಪತಿ ಎಂಬ ಭಾವದಿಂದ
ಲಿಂಗಕ್ಕೆ ಮನಕೊಟ್ಟು ವಧುವಾದನಲ್ಲದೆ,
ತನ್ನಂಗನೆಯ ಕೊಡಲಿಲ್ಲವು.
ಹೊನ್ನು ಎಂದಡೆ ಜಂಗಮಕ್ಕೆ ಧನವ ಕೊಟ್ಟು
ನಿಧಿ ನಿಧಾನ ಒಲ್ಲವಾದನಲ್ಲದೆ, ತನ್ನಂಗನೆಯ ಕೊಡಲಿಲ್ಲವು.
ಮಣ್ಣು ಎಂದಡೆ ತನ್ನ ತನುವ ಗುರುವಿಂಗೆ ಕೊಟ್ಟು
ಸ್ವಯಂಭುನಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು.

ಶರಣರು ಆಚರಿಸಿದ ಷಟ್‌ಸ್ಥಲ ಮಾರ್ಗದ ಹಿನ್ನೆಲೆಯಲ್ಲಿ ಈ ವಚನವನ್ನು ವಿಶ್ಲೇಷಿಸಲಾಗಿದೆ. "ಸ್ಥಲ" ಎಂಬುದು ಪ್ರಧಾನವಾಗಿ ಎರಡು: ಲಿಂಗಸ್ಥಲ ಮತ್ತು ಅಂಗಸ್ಥಲ. ಮೊದಲನೆಯದು ಶಿವ; ಎರಡನೆಯದು ಜೀವ. ಲಿಂಗಸ್ಥಲ–ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಎಂದಾಗಿ, ಅದರಲ್ಲಿ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗ ಎಂಬ ಆರು ಸ್ಥಳಗಳಾಗುತ್ತವೆ. "ಜಂಗಮಸ್ಥಲ" ಇವುಗಳಲ್ಲಿ ಒಂದು. ಅಂಗಸ್ಥಲ–ಯೋಗಾಂಗ, ಭೋಗಾಂಗ, ತ್ಯಾಗಾಂಗ ಎಂದಾಗಿ, ಅದರಲ್ಲಿ ಭಕ್ತ-ಮಹೇಶ, ಪ್ರಸಾದಿ-ಪ್ರಾಣಲಿಂಗಿ, ಶರಣ-ಐಕ್ಯ ಎಂಬ ಆರು ಸ್ಥಲಗಳಾಗುತ್ತವೆ. "ಭಕ್ತಸ್ಥಲ" ಇವುಗಳಲ್ಲಿ ಒಂದು; ಅದು ತ್ಯಾಗಾಂಗಕ್ಕೆ ಸಂಬಂಧಿಸಿದ್ದು. ಲೌಕಿಕದಲ್ಲಿ ನೆಲೆಗೊಂಡಿದ್ದ ಜೀವ ಶಿವನಲ್ಲಿ ಲೀನಗೊಂಡಾಗ ಲಿಂಗಾಂಗ ಸಾಮರಸ್ಯ ಏರ್ಪಡುತ್ತದೆ. ಇಲ್ಲಿ 'ಅಳಿದು, ಅಳವಟ್ಟು, ಕೊಟ್ಟು' ಎಂಬ ಪದಗಳ ಔಚಿತ್ಯವನ್ನು ಗಮನಿಸಬೇಕು. 'ಅಳಿದು ಎಂದಡೆ' ನಾಶವಾಗುವುದು

ಎಂದರ್ಥ. ತನು-ಮನ-ಧನ ಎಂಬ "ಮೂರಳಿದ", ಗುರುಲಿಂಗಜಂಗಮ ಎಂಬ "ಮೂಜಿಳವಟ್ಟು", ಸಾಧಕ ಭಕ್ತಸ್ಥಲ ಮತ್ತು ಜಂಗಮಸ್ಥಲದಲ್ಲಿ ಸೇರಿಹೋಗುತ್ತಾನೆ. ಇದನ್ನು ಸಾಧಿಸುವ ಉಪಾಸಕ ಅಷ್ಟಾವರಣಗಳ ಆಚರಣೆಗೂ ಬದ್ಧನಾಗಬೇಕು. ಗುರುಲಿಂಗಜಂಗಮ, ಪಾದೋದಕ ಪ್ರಸಾದ, ವಿಭೂತಿ-ರುದ್ರಾಕ್ಷಿ ಮಂತ್ರ ಎಂಬ ಅಷ್ಟಾವರಣಗಳಲ್ಲಿ ಗುರುಲಿಂಗಜಂಗಮ ಮುಖ್ಯವಾದವು, ಭಕ್ತನನ್ನು ಸಾಧನೆಗೆ ತೊಡಗಿಸುವನು ಗುರು. ಜ್ಞಾನಸಂಪಾದನೆ ಎಂದರೆ ನಿರಾಕಾರ ಸ್ವರೂಪವನ್ನು ಕಾಣುವುದು. ಇದು ಗುರುಕಾರುಣ್ಯದಿಂದ ಮಾತ್ರ ಸಾಧ್ಯ. ಗುರುವಿನ ಚರಣದ ಮೇಲೆ ತನುವೆಂಬ ತೃಣವನ್ನು ಇಟ್ಟರೆ ಸಾಕು, ತನು ಸಮೇತವಾಗಿರುವ ಪಂಚೇಂದ್ರಿಯಗಳು ಸುಟ್ಟು ಬೂದಿಯಾಗಿ ನಿರ್ಮಲವಾದ ಅಂತಃಕರಣವೊಂದು ಸಿದ್ಧವಾಗುತ್ತದೆ; ಹಾಗೂ ಸರ್ವಾಂಗ ಲಿಂಗಸ್ವರೂಪವನ್ನು ಧರಿಸುತ್ತದೆ; ತನು ಮಲತ್ರಯಗಳನ್ನು ಸುಟ್ಟೀಗ ಭಕ್ತಿಯ/ಘನ ಸಿಧಾನಕ್ಕೆನ್ನ ಪಟ್ಟಗಟ್ಟಿ/ಇಹ–ಪರ ಲೋಕಕ್ಕೆ ಅರಸನ್ನ ಮಾಡಿದ/ಘನ ಗುರುವಿಗೆ ನೀನಯ್ಯ ಯೋಗಿನಾಥ, ಎಂದಿದ್ದಾನೆ, ಸಿದ್ಧರಾಮ (ಅಷ್ಟಾವರಣ ತ್ರಿವಿಧಿ,34) ತನುವನ್ನು ಗುರುವಿಗೆ 'ಕೊಟ್ಟಾಗಳೆ' ಮಣ್ಣ ಮೋಹ ಅಳಿಯುತ್ತದೆ. ಮುಂದೆ ಗುರುಮಾರ್ಗ ಜ್ಞಾನದಿಂ ಲಿಂಗವ ನೋಡಲು (ಅ.ತ್ರಿ69) ಸಾಧಕನ ಮನಸ್ಸು ಹವಣಿಸುತ್ತದೆ. ಶರಣನೇ ಹೆಣ್ಣಾಗಿ, ಲಿಂಗವೇ ಪತಿಯಾಗಿ ಮನವನ್ನು ಲಿಂಗಕ್ಕೆ "ಕೊಟ್ಟಗಳೆ" ಹೆಣ್ಣು ಎಂಬ ಮಾಯೆ ಅಳಿಯುವುದು. ಶರಣ ಸತಿಭಾವ ಲಿಂಗಪತಿಗೆ ತನ್ನನ್ನು ಸಮರ್ಪಿಸಿಕೊಳ್ಳುವ ರೀತಿ ಅನನ್ಯವಾದುದಾಗಿದೆ. 'ಇದ್ದ ಧನವನ್ನು ಜಂಗಮಕ್ಕೆ ಕೊಟ್ಟಾಗಳೆ ಹೊನ್ನಳಿದುದು'-ಅಂದರೆ, ಲೋಭಭಾವದಿಂದ ದೂರ ನಿಲ್ಲುವುದು. ಆದ್ದರಿಂದ ಕಾಮ, ಮೋಹ, ಲೋಭಗಳಿಂದ ಬಿಡಿಸಿಕೊಳ್ಳುವುದೆಂದರೆ ಗುರು-ಲಿಂಗ-ಜಂಗಮದಲ್ಲಿ ಬೆರೆತು ಸ್ವಯಂಭುವಾಗುವುದು, ಪರಬ್ರಹ್ಮನನ್ನು ಸಂಪಾದಿಸುವುದು. ಮನದ ಮುಂದಿನ ಆಸೆಯ ರೂಪದಲ್ಲಿ ಹೆಣ್ಣು–ಹೊನ್ನು–ಮಣ್ಣುಗಳನ್ನು ತನು–ಮನ–ಧನದ ರೂಪದಲ್ಲಿ "ಕೊಟ್ಟು" ಅವುಗಳಿಂದ ಬೇರೆಯಾಗುವುದೆ "ತನ್ನಂಗನೆಯ ಕೊಡದ" ರೀತಿಯಲ್ಲಿದೆ. ಸಿಂಧುಬಲ್ಲಾಳ ತನ್ನ ವಧುವನ್ನು ಕೊಟ್ಟು ಬಗೆ ತನು–ಮನ–ಧನ ರೂಪದ್ದೀ ಹೊರತು 'ತನ್ನಂಗನೆಯ' ರೂಪದ್ದಲ್ಲ

ಅಯ್ಯ, ಸಂಸಾರವೆಂಬ ಸಾಗರಕ್ಕೆ
ಒಡಲೆಂಬುದೊಂದು ಭೈತ್ರ ಕಂಡಯ್ಯ
ಪುಣ್ಯ ಪಾಪವೆಂಬ ಭಂಡವನೆ ತುಂಬಿ
ಪಂಚೈವರು ಏರಿದಡೆ,
ಜ್ಞಾನವೆಂಬ ಕೂಕಂಬಿಯಲ್ಲಿ ಲಿಂಗವೆಂಬ
ತಾರಾಮಂಡಲವ ನೋಡಿ ನಡೆಸುವುದು.
ಜವನ ಕಾಲಾಳು ಕರಹಿರಿದು ಕಂಡಾ,
ಸಮಭೋಗವೆಂಬ ನೇಣ ನವನಾಳದಲ್ಲಿ ಕಟ್ಟಿ,



ಮನವೆಂಬ ಪಾವೆಯನು ವಾಯುಗೋಳಲು,
ಕಳವಳವೆಂಬ ಕಡಲೊಳಗೆ ಸಿಲುಕೆ,
ತೆರೆಯ ಹೊಯ್ಲು ಕರಹಿಡಿಡು ಕಂಡಯ್ಯ,
ಉದಮದವೆಂಬ ಸುಳಿಯಲ್ಲಿ ತಿರುಗಿಸದೆ
ಗುರುಪದವೆಂಬ ಬಿಣ್ಗುಂಡ ಹಿಡಿ ಕಂಡಾ
ಇಹಲೋಕ ಪರಲೋಕ ಕಪಿಲಸಿದ್ಧ ಮಲ್ಲೇಶ್ವರನಕಾಂಬೆ ಕಂಡಾ!

ಭಕ್ತ ಒಡಲನ್ನು ಸಂಪೂರ್ಣವಾಗಿ ತ್ಯಜಿಸಲಾರ. ಆ ಮೂಲಕವೇ ಅವನು ಸಾಧಕನಾಗುವುದು. ಶರೀರವನ್ನು ಧರಿಸಿಯೂ ಅದಕ್ಕೆ ಅಂಟದಂತೆ ಇರುವುದೇ ನಿಜವಾದ ಶರಣನ ಗುಣ. ಸಿದ್ಧರಾಮ ಈ ವಿಚಾರವನ್ನು ಅನೇಕ ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ. ದೇಹ-ಜೀವ ಅಭಿನ್ನವಾದವುಗಳು. ಅವುಗಳನ್ನು ಸುಲಭವಾಗಿ ಬೇರ್ಪಡಿಸಲು ಸಾಧ್ಯವಿಲ್ಲ. ಅವೆರಡನ್ನು ಬಿಚ್ಚಲಾರದಂತೆ ಹೊಲಿಗೆ ಮಾಡಲಾಗಿದೆ. ಆ ಸಂಬಂಧವನ್ನು ಬಿಡಿಸುವಾಗ ಬಹಳ ಎಚ್ಚರವಿರಬೇಕು. ಎನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ, ಎಂಬ ಸಿದ್ಧರಾಮನ ಉಕ್ತಿ ಬಹಳ ಅರ್ಥಪೂರ್ಣವಾದುದು. ದೇಹದಿಂದ ಪಾರಾಗಬೇಕೆಂಬ ಜೀವದ ಹಂಬಲವನ್ನು ಅರಿತು ಆದರಿಂದ ಬಿಡುಗಡೆ ನೀಡುವವನು ಬೇರೊಬ್ಬನಿದ್ದಾನೆ. ಈ ಬೆಸುಗೆಯನ್ನು ಬಿಡಿಸಲು ಹಾಕಿದವನಿಂದ ಮಾತ್ರ ಶಕ್ಯ. ಹೊಲಿಗೆಯನ್ನು ಬಿಚ್ಚುವುದು ಎಷ್ಟು ಸೂಕ್ಷ್ಮಕ್ರಿಯೆ ಎಂಬುದನ್ನು ಹೀಗೆ ನಿರೂಪಿಸಿದ್ದಾನೆ. ನೀರಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲದು ನೋಡಯ್ಯ/ದೇಹದ ಜೀವದ ಸಂದ ನೀವು ಬಿಚ್ಚಬಲ್ಲಿರಲ್ಲದೆ / ನಾನೆತ್ತಬಲ್ಲೆನಯಯ್ಯ? ನೀವಿಕ್ಕಿದ ತೊಡಕ ಬಿಡಿಸಬಾರದು ನೀವು ಬಡಿಸಿದ ತೊಡಕ ಬಿಡಿಸಬಾರದು/ನೀವು ಬಿಡಿಸದ ತೊಡಕಸಿಕ್ಕಬಾರದು/ಕಪಿಲ ಸಿದ್ಧಮಲ್ಲಿನಾಥಯ್ಯಾ, ಆದ್ದರಿಂದ ಶರೀರ ಅನಿತ್ಯವಾದುದೆಂದು ಭಾವಿಸಲಾಗುವುದಿಲ್ಲ. ಒಡಲೆಂಬುದು ಒಂದು ಭೈತ್ರ; ಎಂದರೆ ಹಡಗು. ಆದು ಸಂಸಾರವೆಂಬ ಸಾಗರದಲ್ಲಿ ಕ್ರಮಿಸುತ್ತದೆ. ಅದರಲ್ಲಿ ಪುಣ್ಯಪಾಪಗಳೆಂಬ ಸರಕು ತಂಬಿದೆ; ಪಂಚೇಂದ್ರಿಯಗಳೆಂಬ ಐವರು ಅದನ್ನು ಏರಿ, ಆ ಹಡಗನ್ನು ನಡೆಸಿದ್ದಾರೆ ಹಡಗಿಗೆ "ಜ್ಞಾನವೆಂಬ" ಧ್ವಜಸ್ತಂಬ; 'ಲಿಂಗವೆಂಬ' ತಾರಮಂಡಲ, ಸಮಭೋಗವೆಂಬ ಹಗ್ಗ; ಮನವೆಂಬ ನೌಕಾಪಟ-ಇವೆಲ್ಲವೂ ಇವೆ. ಹೀಗೆ ಸಂಸಾರವೆಂಬ ಸಾಗರದಲ್ಲಿ ಒಡಲೆಂಬ ಹಡಗಿನ ಯಾವ ಜ್ಞಾನವೆಂಬ ಧ್ವಜಸ್ತಂಭದಲ್ಲಿ ನೆಲೆಗೊಂಡ 'ಇಷ್ಟಲಿಂಗಕ್ಕೆ' ಅನುಗುಣವಾಗಿ ಸಾಧಕ ನಡೆಯಬೇಕು. ಆತ ಜಂಗಮತ್ವವನ್ನು ಪಡೆಯುವುದೆಂದರೆ ಇಷ್ಟಲಿಂಗದ ಅಧೀನವಾಗುವುದು ಎಂದೇ ಅರ್ಥ. ಏಕೆಂದರೆ ಜೀವ ಎಂದೂ ಸ್ಥಾವರವಾದುದಲ್ಲ. ಇದು ದೇಹದೊಂದಿಗೆ ಬೆರೆತು ಚರಿಸುತ್ತಿರುತ್ತದೆ. ಹೀಗಿದ್ದೂ ಕೂಡ ಕೆಲವೊಮ್ಮೆ ಮನವೆಂಬ ನೌಕಾಪಟ ದೇಹ-ಭಾವಗಳಿಗೆ ಒಳಗಾಗಿ ಕಳವಳ ಪಡುವುದುಂಟು. ಆಗ ಉದಮದವೆಂಬ ಸುಳಿಯಲ್ಲಿ ಒಡಲೆಂಬ ಹಡಗುಸಿಕ್ಕಿ ತೆರೆಯ ತಾಡನಕ್ಕೆ

ಒಳಗಾಗುತ್ತದೆ. ಆದ್ದರಿಂದ ದೇಹಭಾವ ಅಳಿದು, ಜೀವಭಾವ ನೆಲೆ ನಿಲ್ಲಬೇಕಾದರೆ ಗುರುಪದವೆಂಬ ಬಿಣ್ಣುಂಡನ್ನು ಹಿಡಿಯುವುದು ಅನಿವಾರ್ಯ. ಹೀಗಾದಾಗ ಮಾತ್ರ ಇಹಪರಗಳೆರಡರ ಸಮುಭೋಗ ಸಾಧ್ಯ. ಅದ್ದರಿಂದ ಮನಸ್ಸನ್ನು ಸಮುಭೋಗವೆಂಬ ನೇಣ ನವನಾಳದಲ್ಲಿ ಕಟ್ಟಿ, ಒಡಲೆಂಬ ಹಡಗನ್ನು ನಡೆಸಬೇಕೆಂದಿದ್ದಾರೆ. ಗಾಂಧಾರೀ, ಹಸ್ತಿಜಿಹ್ವಾ, ಪೂಷಾ, ಪಯಸ್ವಿನೀ ಅಲಂಬು, ಲಕುಹ, ಶಂಕಿನೀ, ಇಡಾ, ಪಿಂಗಳಾ, ಸುಷುಮ್ನಾ-ಇವುಗಳೇ ದಶನಾಡಿಗಳು ಸುಷಮ್ನಾ ಎಂಬುದನ್ನು ಬಿಟ್ಟು ಉಳಿದವುಗಳೇ ನವನಾಳಗಳು.

ಕಣ್ಬೇಟವೆಂಬ ಕಾನನದಲ್ಲಿ ಅರಸುತ್ತಿದ್ದೇನೆ,
ಭಕ್ತಿಯೆಂಬ ಹೊಮ್ಮಿಗವ ಸೋವುತ್ತಿದ್ದೇನೆ.
ಲಿಂಗತ್ರಯವೆಂಬ ಬಲೆಗಾಗಿ ಮಿಗ ಸಿಕ್ಕಿ ಬಲೆಹರೆದೊಂದಾಡಡೆ
ಎಯ್ದಿದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ
ಪರಮ ಮುಕ್ತಿರಾಜ್ಯವನು

ಇದು ಶಬ್ದಚಿತ್ರವಾಗಿ ಮೂಡಿಬಂದ ವಚನ. ಆಸೆ ಎಂಬ ಕಾನನದಲ್ಲಿ ಭಕ್ತನಾದವನು ಅರಸುತ್ತಿರುವುದು ಸಾಮಾನ್ಯ ವಸ್ತುವನ್ನಲ್ಲ; ಭಕ್ತಿ ಎಂಬ ಪ್ರಾಣಿಯನ್ನು ಆ ಮಿಗ ಲಿಂಗತ್ರಯವೆಂಬ-ಅಂದರೆ, ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಬಲೆಗೆ ಒಳಗಾದರೆ ಸಾಕು, ಭಕ್ತನಿಗೆ ಪರಮ ಮುಕ್ತಿರಾಜ್ಯ ದೊರೆಯುತ್ತದೆ. ಭಕ್ತನಾಗುವುದು ಕೂಡ ಸುಲಭ ಸಾಧ್ಯವಲ್ಲ ಎಂಬುದೇ ಈವಚನದ ಒಳ ಅರ್ಥ. ಏಕೆಂದರೆ ಆತನ ಎದುರು ವಿಸ್ತಾರವಾಗಿ, ದಟ್ಟವಾಗಿ ಆಸೆ ಎಂಬ ಲೌಕಿಕ ಅರಣ್ಯ ಬೆಳೆದಿದೆ. ಅದರಲ್ಲಿ ಭಕ್ತಿ ಎಂಬ ಶ್ರೇಷ್ಠ ಮಿಗವನ್ನು ಹುಡುಕಬೇಕಿದೆ. ಆದರೆ, ಅದು ಹುಡುಕಿದರೆ ಮಾತ್ರ ಸಿಗುವ ಸಾಮಾನ್ಯ ಪ್ರಾಣಿಯಲ್ಲ. ಅದನ್ನು ಶ್ರದ್ಧೆ, ನಿಷ್ಠೆಯಿಂದ ಬೆನ್ನಟ್ಟಿ ಹೋದಾಗ ಮಾತ್ರ ದೊರೆಯುವಂಥದ್ದು. "ಕಣ್ಬೇಟವೆಂಬ ಕಾನನದಲ್ಲಿ ಅರಸುತ್ತಿದ್ದೇನೆ" ಎಂಬ ಸಾಲಿನಲ್ಲಿ ಅರಸುತ್ತಿದ್ದೇನೆ ಎಂಬ ಕ್ರಿಯಾಪದದ ಮೇಲೆ ಹೆಚ್ಚು ಒತ್ತು ಬಿದ್ದಿರುವುದನ್ನು ಇಲ್ಲಿ ಗಮನಿಸಬೇಕು. ಹಾಗೆಯೇ ಎರಡನೆಯ ಸಾಲಿನಲ್ಲಿ ಬರುವ ನೋವುತ್ತಿದ್ದೇನೆ ಎಂಬ ಪದವು ಭಕ್ತನೊಬ್ಬನ ಅದಮ್ಯ ಹುಡುಕಾಟವನ್ನು ಸೂಚಿಸುತ್ತದೆ. ಬೇಟೆ ಎಂಬುದು ಬೇಟೆ ಎಂಬ ಅರ್ಥದಲ್ಲಿ ಬಳಕೆಯಾಗಿಲ್ಲ. ಅದು ಸಾಧಕನನ್ನು ಸೆಳೆಯುವ ಆಸೆ ಎಂಬ ಕಾನನವಷ್ಟೆ. ಅದರಲ್ಲಿ ಭಕ್ತಿ ಎಂಬ ಭಾವವನ್ನು ಹುಡುಕಿ ಲಿಂಗ ಕ್ರಿಯವೆಂಬ ಬಲೆಯನ್ನು ಹರಿದು ಮುಕ್ತಿ ಪಡೆಯುವುದೆ ಪರಮ ಭಕ್ತಿ ನಿಷ್ಠೆ. ಈ ಸಂದರ್ಭದಲ್ಲಿಯೇ ಸಿದ್ಧರಾಮನ ಮತ್ತೊಂದು ವಚನವನ್ನು ಗಮನಿಸುವುದು ಸೂಕ್ತ. "ಕಂಗಳ ಬೇಟೆಯನಾಡುವ ಕಾಮನ ಸಂಗಕ್ಕೆನ್ನ ಸಲಿಸದೆ ಮಂಗಳಮಯನಪ್ಪ ಉರುತರ ಭಕ್ತಿಯ ಸಂಗಕ್ಕೆನ್ನ ಸಲಿಸಯ್ಯ ಅನಂಗ ವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಾ".



ಮನಸ್ಸಿನ ಮುಂದೆ ಹೆಣ್ಣೆಂಬುದು ಆಸೆಯೆಂಬ ಮಾಯೆಯಾಗಿ ನಿಂತಾಗ ಕಣ್ಣು ಅದನ್ನು ಬೇಟೆಯಾಡುವುದಂತೆ. ಆದರೆ, ಆ ಕಣ್ಣುಗಳನ್ನು ಬೇಟೆಯಾಡುವ ಮತ್ತೊಬ್ಬ ಬೇಟೆಗಾರ, ಕಾಮ. ಹೀಗಾಗಿ, ಕಂಡದ್ದರಲ್ಲಿ ಬೇಟದ ಭಾವ ಕಳೆದು ಮನೋವಿಕಾರಗಳಿಗೆ ಒಳಗಾಗುವ ಸಾಧ್ಯತೆಯಿರುವುದರಿಂದ ಭಕ್ತನೊಬ್ಬ "ಅನಂಗ ವಿದಾರಣ"ನನ್ನು ಬಿನ್ನವಿಸುವ ಬಗೆ ಇದು. "ಭಕ್ತಿಯ ಸಂಗಕ್ಕೆನ್ನ ಸಲಿಸಯ್ಯ"–ಅಂದರೆ ಸಾಧನೆಯ ಪಥದಲ್ಲಿ ಹೋಗುವ ಭಕ್ತನಿಗೆ ತಾನು ಮಾಡುವ ಕಾರ್ಯದಲ್ಲಿ ಅಚಲ ವಿಶ್ವಾಸ; ಶ್ರದ್ಧೆ-ನಿಷ್ಠೆ ಇರಬೇಕು ಭಕ್ತಿ ಎಂಬುದು "ಹೊಮ್ಮಿಗ" ಅದು ಸಾಮಾನ್ಯ ಪ್ರಾಣಿಯಂತೆ ಸರಳವಾಗಿ ದಕ್ಕುವುದಿಲ್ಲ. ಅದಕ್ಕಾಗಿ ಸದಾ "ಸೋವುತ್ತಿದ್ದೇನೆ" ಎಂದಿದ್ದಾನೆ ವಚನಕಾರ.

ಸಕ್ಕರೆಯು ಆಕಾರ, ರುಚಿಯು ನಿರಾಕಾರ;
ಲಿಂಗವಾಕಾರ, ಜಂಗಮ ನಿರಾಕಾರ;
ಬೆಣ್ಣೆ ಆಕಾರ, ಘೃತ ನಿರಾಕಾರ.
ಆಕಾರ ಬಿಟ್ಟು ನಿರಾಕಾರವಿಲ್ಲ, ನಿರಾಕಾರ ಬಿಟ್ಟು ಆಕಾರವಿಲ್ಲ.
ಲಿಂಗ ಜಂಗಮವೆಂಬುಭಯ ಶಬ್ದ ಒಂದೆ ನೋಡಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ.

ಜಗತ್ತಿನ ಬಹಿರಂಗ ರೂಪದ ಹಿಂದೆ ಅಗೋಚರ ಸ್ವರೂಪದ ಚಿರಂತನ ಸತ್ಯವೊಂದು ಅಡಗಿದೆ. ಅದು ಅಣುರೇಣುತೃಣಗಳ ಮಧ್ಯದಲ್ಲಿ ಸಂಚರಿಸುತ್ತಿದೆ. ಒಂದು ಆಕಾರದಲ್ಲಿ ಕಂಡರೂ, ಕಾಣದ ನಿರಾಕಾರವೊಂದು ಅದರ ಜೊತೆ ಬೆಸೆದುಕೊಂಡಿದೆ. ಶರಣರು ಹೇಳಿರುವ ಶಕ್ತಿ ವಿಶಿಷ್ಟಾದ್ವೈತದ ಕಲ್ಪನೆ ಕೂಡ ಇದೇ ಆಗಿದೆ. "ಸಕ್ಕರೆ, ಲಿಂಗ, ಬೆಣ್ಣೆ" ಇವುಗಳ ಆಕಾರ ಗೋಚರವಾದರೂ, "ರುಚಿ, ಜಂಗಮ, ಘೃತ" ಇವುಗಳು ಅಗೋಚರವಾದವುಗಳು. ಇಲ್ಲಿ ಅನುಭಾವಿಯ ನಿಲುವಿನಲ್ಲಿ ಸಿದ್ಧರಾಮ ಲೋಕ ಸತ್ಯವನ್ನು ಅರ್ಥೈಸಿದ್ದಾನೆ. "ಸಾಹಿತಿ ವಸ್ತುವಿನ ರೂಪವನ್ನು ವರ್ಣಿಸುತ್ತಾನೆ. ಅನುಭಾವಿ ವಸ್ತುವಿನ ಸ್ವರೂಪ ರಹಸ್ಯವನ್ನು ಕುರಿತು ಯೋಚಿಸುತ್ತಾನೆ. ತನ್ನ ಭಾವನೆಗಳಿಗೆ ರೂಪಧಾರಣೆ ಮಾಡುವ ಪ್ರಯತ್ನ ಸಾಹಿತಿಯದಾದರೆ, ಆ ಭಾವನೆಗಳನ್ನೇ ಅನುಸರಿಸಿ ನಡೆದು, ಅವುಗಳಿಂದ ಪರಿಪುಷ್ಟಿಯನ್ನು ಪಡೆದು ಮೇಲೇರುವವನು ಅನುಭಾವಿ". (ಎಚ್. ತಿಪ್ಪೇರುದ್ರಸ್ವಾಮಿ; ಕನ್ನಡದಲ್ಲಿ ಅನುಭಾವ ಸಾಹಿತ್ಯ; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 1980, ಪು 6) ಎಂಬ ಮಾತು ಸಿದ್ಧರಾಮನಿಗೂ ಅನ್ವಯಿಸುತ್ತದೆ. ಆದ್ದರಿಂದ "ಆಕಾರ ಬಿಟ್ಟು ನಿರಾಕಾರವಿಲ್ಲ; ನಿರಾಕಾರಬಿಟ್ಟು ಆಕಾರವಿಲ್ಲ" ಅಂತೆಯೇ ಲಿಂಗ-ಜಂಗಮವೆರಡೂ ಒಂದಾಗಿ ಉಳಿಯುವ ಅಭೇದ್ಯ ಸಂಬಂಧವನ್ನು ಈ ವಚನ ಹಿಡಿದಿಟ್ಟಿದೆ.

ಓದುವುದದು ಸದ್ಗುಣಕ್ಕಲ್ಲದೆ ಕಿವಿಯನೂದುವುದಕ್ಕೇನೋ, ಅಯ್ಯಾ ?
ಮಾಡುವ ಭಕ್ತಿ ಮೋಕ್ಷಕ್ಕಲ್ಲದೆ ಡಂಭಾಚಾರಕ್ಕೇನೋ ಅಯ್ಯಾ ?
ಆಡುವ ವೇಷ ದ್ರವ್ಯಕ್ಕಲ್ಲದೆ ಜನರಾಡಂಬರಕ್ಕೇನೋ, ಅಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ ?

ಇಲ್ಲಿ ಸಿದ್ಧರಾಮ ಸಾಮಾಜಿಕರ ಡೊಂಕನ್ನು, ಡಾಂಬಿಕತೆಯನ್ನು ಸೂಕ್ಷ್ಮವಾಗಿ ಟೀಕಿಸಿದ್ದಾನೆ. ವಿದ್ಯೆಕಲಿಯುವುದು ಸದ್ಗುಣಕ್ಕಾಗಿ, ವಿನಯಶೀಲ ವ್ಯಕ್ತಿತ್ವದ ಸಂಪಾದನೆಗಾಗಿ. ಆದರೆ, ಹಲವರು ಕಲಿತ ವಿದ್ಯೆಯನ್ನು "ಕಿವಿಯನೂದುವುದಕ್ಕೆ" ಬಳಸುತ್ತಾರೆ. "ಊದು" ಎಂಬ ಪದ ಅನರ್ಥವನ್ನು ಉಂಟುಮಾಡುವ ಕ್ರಿಯೆಯನ್ನೇ ಸೂಚಿಸುತ್ತದೆ. ಹಾಗೆಯೇ ಕೆಲವು ಭಕ್ತರು ಡಂಬಾಚಾರಕ್ಕಾಗಿ ನಟಿಸುವರೇ ವಿನಾ ಮೋಕ್ಷ ಸಂಪಾದನೆಗೆ ಅಲ್ಲ. ಅನಾಚಾರಿಗಳು ದ್ರವ್ಯಕ್ಕಾಗಿ ಹಲವು ವೇಷ ಧರಿಸಿ ಆಡಂಬರವನ್ನು ಪ್ರಕಟಿಸುತ್ತಾರೆ. ಈ ಎಲ್ಲಾ ಸಾಮಾಜಿಕ ವಿಪರ್ಯಾಸಗಳನ್ನು ಕಂಡ ಸಿದ್ಧರಾಮ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಹೀಗೆ ಕೇಳಿದ್ದಾನೆ: ಅಯ್ಯಾ, ಓದು ಕಿವಿಯನೋದುವುದಕ್ಕೇನೊ, ಭಕ್ತಿ ಡಂಬಾಚಾರಕ್ಕೇನೋ, ವೇಷ ಜನರಾಡಂಬರಕ್ಕೇನೋ ! ಈ ಸಂದರ್ಭದಲ್ಲಿ ಆತನ ಮತ್ತೊಂದು ವಚನ ನೆನಪಾಗುತ್ತದೆ.

ಕಲ್ಮಡಿಗನ ಕೈಯಲ್ಲಿ ಕಲ್ಲುಳಿ ಕೊಟ್ಟಡೆ,
ಕೊಟ್ಟಂತಲ್ಲದೆ ಕಲ್ಲು ರೂಪಾಗಿ ಬಾರದಯ್ಯಾ.
ಆದ್ಯರ ವಚನ ಅವಿದ್ಯಾವಂತನ ಜಿಹ್ವೆಯಲ್ಲಿದ್ದಡೆ,
ಇದ್ದಂತಲ್ಲದೆ ವಿದ್ಯಾಮಯ ಕೀರ್ತಿಯಾಗನಯ್ಯಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ.

ಅವಿದ್ಯಾವಂತನನ್ನು ಕುರಿತ ಟೀಕೆ ಇದಕ್ಕಿಂತಲೂ ತೀಕ್ಷ್ಣವಾಗಿರಲು ಸಾಧ್ಯವೆ! ಆತನ ಜಿಹ್ವೆಯಲ್ಲಿ ಆದ್ಯರ ವಚನ ಕೂಡ ಇದ್ದಂತೆ ಇರುವುದಲ್ಲದೆ ಯಾವುದೇ ಬಗೆಯ ಅರ್ಥವಿಸ್ತಾರವನ್ನು ಪಡೆದುಕೊಳ್ಳಲಾರದು. ಅದು ಹೇಗೆಂದರೆ ಒಡ್ಡನ ಕೈಯಲ್ಲಿ ಕಲ್ಲು ಕೊಟ್ಟರೆ, ಆ ಕಲ್ಲು ಕಲಾರೂಪವನ್ನು ಪಡೆಯದೆ ಕೊಟ್ಟ ಹಾಗೆಯೇ ಇರುತ್ತದೆ. ಆದ್ದರಿಂದ ಅಪೂರ್ವವಾದುದನ್ನು ಅಪಾತ್ರನ ಕೈಯಲ್ಲಿ ಕೊಡಬಾರದೆಂಬುದೇ ಸಿದ್ಧರಾಮನ ಸಂದೇಶ.





# ಕೃತಜ್ಞತೆಯ ಸದ್ಗುಣ

ಪ ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಅಂಚೆ–ಮಚ್ಚಿನ 574292, (ದ. ಕನ್ನಡ)

ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂದು ದೊರೆಯೊಬ್ಬನಿಗೆ ಆಸೆ. ಅದಕ್ಕಾಗಿ ಹಲವು ದಾನ ಧರ್ಮಾದಿಗಳನ್ನು ಮಾಡಿದ. ಕೆರೆಗಳನ್ನು ಕಟ್ಟಿಸಿದ. ವಿದ್ಯಾಲಯಗಳನ್ನು ನಿರ್ಮಿಸಿದ. ಹೋಮ ಹವನಗಳನ್ನು ಮಾಡಿಸಿದ. ಕಡೆಗೆ ಒಬ್ಬ ಸಂತನೊಂದಿಗೆ ಮಹಾತ್ಮರೇ ನನ್ನ ಆಶೆ ಈಡೇರಲು ನಾನು ಇನ್ನೇನು ಮಾಡಬೇಕೆಂದು ತಿಳಿಸುತ್ತೀರಾ ? ಎಂದು ಪ್ರಾರ್ಥಿಸಿದ.

ದೊರೆಯೇ ನಿನ್ನಲ್ಲಿ ಎಲ್ಲ ಪುಣ್ಯಬಲವೂ ಇದೆ. ಆದರೆ ಒಂದೇ ಒಂದು ಅಕ್ಷರದ ಕೊರತೆ ನಿನ್ನಲ್ಲಿರುವುದರಿಂದಾಗಿ ಕೋರಿಕೆ ಈಡೇರಲು ಅಡ್ಡಿಯಾಗಿದೆ ಎಂದನು ಸಂತ. ಆ ಕೊರತೆ ಯಾವುದೆಂದು ಹೇಳುತ್ತೀರಾ ? ಎಂದು ದೊರೆ ಕೇಳಿದಾಗ ಸಂತನು ಅರಣ್ಯ ಮಧ್ಯದಲ್ಲಿ ಒಬ್ಬ ಆಟವಿಕ ಯುವಕನಿದ್ದಾನೆಂದೂ ಅವನನ್ನು ಕಂಡರೆ ಈ ಪ್ರಶ್ನೆ ಬಗೆ ಹರಿಯುತ್ತದೆಂದೂ ಹೇಳಿದ. ದೊರೆ ಯುವಕನನ್ನು ಹುಡುಕಿಕೊಂಡು ಕಾಡಿಗೆ ಹೋದ. ಆಗ ಹುಲಿಯೊಂದು ಅವನನ್ನು ಓಡಿಸಿಕೊಂಡು ಬಂತು. ಅಷ್ಟರಲ್ಲಿ ಮರವೊಂದರಲ್ಲಿ ಕುಳಿತಿದ್ದ ಆ ಯುವಕ ಹಗ್ಗವೊಂದನ್ನಿಳಿಸಿ ದೊರೆಯನ್ನು ಮರದ ಮೇಲಕ್ಕೇರಿಸಿಕೊಂಡ. ಬಿದಿರಕ್ಕಿಯ ಗಂಜಿ ಮತ್ತು ಜೇನುತುಪ್ಪವನ್ನು ಬಡಿಸಿ ಹಸಿವು ನೀಗಿಸಿದ. ಆ ಮೇಲೆ ದೊರೆಯನ್ನು ಮಲಗುವಂತೆ ತಿಳಿಸಿ ತಾನು ಕಾಲು ಒತ್ತಲಾರಂಭಿಸಿದ.

ಆದರೆ ಮರದ ಕೆಳಗೆ. ಕುಳಿತ ಹುಲಿ ಇನ್ನೂ ಹೋಗಿರಲಿಲ್ಲ. ಮೇಲಿನಿಂದ ಇಬ್ಬರಲ್ಲೊಬ್ಬನು ಕೆಳಗಿಳಿದರೆ ತಿನ್ನಬಹುದೆಂದು ಎನಿಸಿತ್ತು. ದೊರೆಯು ಅದನ್ನು ಕಂಡು ತೂಕಡಿಸುತ್ತಾ ಕುಳಿತ ಯುವಕ ಕೆಳಗೆ ಬೀಳಲೆಂದು ಕಾಲಿನಿಂದ ಝಾಡಿಸಿದ. ಅಷ್ಟರಲ್ಲಿ ಯುವಕಸಾವರಿಸಿಕೊಂಡು ಮರವನ್ನು ಆತುಕೊಂಡ. ದೇವವಿಮಾನವೊಂದು ಬಂದು ಅವನನ್ನು ಸ್ವರ್ಗದೆಡೆಗೆ ಕರೆದೊಯ್ದಿತು. ದೇವವಾಣಿಯು ದೊರೆಯನ್ನುದ್ದೇಶಿಸಿ ದೊರೆಯೇ ತಿಳಿದುಕೋ, ನಿನ್ನಲ್ಲಿರುವ ಒಂದಕ್ಷರದ ಕೊರತೆಯೇಯಜ್ಞ ಎಂಬುದು. ಕೃತಜ್ಞನಾಗುವ ಬದಲು ಕೃತಘ್ನನಾದೆಯಲ್ಲ. ಇದೇ ನಿನ್ನ ಪುಣ್ಯ ಬಲವನ್ನು ಕ್ಷಯಿಸಿ, ಸ್ವರ್ಗದೆಡೆಗೆ ಹೋಗಲು ಆತಂಕ ತಂದಿದೆ" ಎಂದನು,

ನಮ್ಮ ನಿತ್ಯ ಜೀವನವನ್ನು ಅವಲೋಕಿಸಿದರೆ ಕೃತಜ್ಞತೆಯು ನಡೆಯದ ನಾಣ್ಯವೆಂಬುದನ್ನು ಗಮನಿಸುತ್ತೇವೆ. ಕಾಗೆಯೊಂದಗುಳ ಕಂಡರೆ ಕೂಡಿ ಕರೆವುದು ತನ್ನ ಬಳಗವ ಎಂದರು ದಾಸರು. ಸಮಯ ಸಾಧಕನಾದ ಮನುಷ್ಯ ಕೂಡಿ ಬಾಳಲಾರ.

ಕೂಡಿ ಬಾಳಿದರೆ ಸ್ವರ್ಗ ಸುಖವೆಂದು ತಿಳಿಯಲಾರ. ಆಡಿ ಬದುಕಲಾರ. ಸಿಕ್ಕಿದುದನ್ನು ಹಂಚಿ ತಿನ್ನಲಾರ. ಪರಮೋನ್ನತವಾದ ದಾನವನ್ನು ಮಾಡಿ ಆತ್ಮಾನಂದವನ್ನು ಹೊಂದಲಾರ. ಕಲ್ಲ ನಾಗರ ಕಂಡರೆ ಹಾಲೆರೆಯುವ ಮಂದಿ ನಿಜದ ನಾಗರ ಕಂಡರೆ ಕೊಲ್ಲೆಂಬರು ಎಂದು ಬಸವಣ್ಣನವರು ಲೇವಡಿ ಮಾಡಿದ್ದು ಇದಕ್ಕೇ ತಾನೆ !

ಹುಟ್ಟಿನಿಂದಲೇ ಮನುಷ್ಯ ಕೃತಜ್ಞತೆಯನ್ನು ರಕ್ತಗತವಾಗಿ ಮೈಗೂಡಿಸಿಕೊಂಡಿರಬೇಕಾದ್ದು ಅನಿವಾರ್ಯ. ನವಮಾಸ ಹೊತ್ತು ವೇದನೆಯನ್ನು ಅನುಭವಿಸುತ್ತಾ ಪ್ರಪಂಚದ ಬೆಳಕನ್ನು ತೋರಿಸಿದ ಅವ್ವೆಯನ್ನು ಮರೆಯಬಹುದೆ? ಸೊಸೆ ಮನೆಗೆ ಬಂದ ಮೇಲೆ ಮಗನಿಗೆಲ್ಲಿದೆ ನೆನಪು ! ಕುಪುತ್ರೋ ಜಾಯೇಥ ಕ್ವಚಿದಪಿ ಕುಮಾತಾ ನಭವತಿ ಕೆಟ್ಟ ಮಗಂದಿರನ್ನು ಗುರುತಿಸಿದ ಭಗವತ್ಪಾದರು ಕೆಟ್ಟ ತಾಯಿಯನ್ನು ಕಾಣಲಿಲ್ಲ. ಬದುಕಿನ ಸತ್ಪಥವನ್ನು ತೋರಿಸಿದ ತಂದೆ, ಅಜ್ಞಾನದ ಕಣ್ತೆರೆಸಿದ ಗುರು ಇವರಿಗೆಲ್ಲ ನಾವು ಕೃತಜ್ಞರಾಗಿರಬೇಕಾದ ಅನಿವಾರ್ಯತೆಯನ್ನು ನೆನಪಿಡುವುದಿಲ್ಲ. ಇಲ್ಲಿಗೇ ಮುಗಿಯಲಿಲ್ಲ ಕ್ಷಮೆಯಲ್ಲಿ ಭೂಮಿಗೆ ಸಾಟಿ ಇನ್ನೆಲ್ಲಿ? ಉಸಿರಾಡುವ ಗಾಳಿ ಕುಡಿಯುವ ನೀರು ತಿಂದುಣ್ಣುವ ಅನ್ನ ನೀಡುವ ಹೊಲವನ್ನು ಹಾಳು ಗೆಡುವ ಮನುಷ್ಯನಿಗೆ ಕೃತಜ್ಞತೆ ಎಲ್ಲಿದೆ?

ನಮಗರಿವಿಲ್ಲದಂತೆ ಮನುಷ್ಯ ಸಮಾಜದಿಂದ ಹೊಂದುವ ಪ್ರಯೋಜನಗಳು ಹಲವಾರಿವೆ. ಕೆಟ್ಟ ಮಾರ್ಗದಲ್ಲಿ ಆತ ಸಂಚರಿಸವುದನ್ನು ತಡೆದು, ನೈತಿಕ ಬಲವನ್ನು ಹೆಚ್ಚಿಸುವ ದೇವಾಲಯಗಳಿವೆ. ಮಠ ಮಂದಿರಗಳಿವೆ. ತನಗೇನೋ ಲಾಭವಿದ್ದರೆಮಾತ್ರ ಅಲ್ಲಿಗೆ ಹೋಗುವ ಅನೇಕರಿಗೆ ಉಳದಂತೆ ಅಲ್ಲಿ ದೇವರಿದ್ದಾನೆಯೆ, ಗುರುಗಳಲ್ಲಿ ಉದ್ಧಾರ ದೃಷ್ಟಿ ಇದೆಯೇ ಮುಂತಾದ ಸಂದೇಹಗಳೂ ಬಾಧೆ ಕೊಡುತ್ತವೆ. ಪವಿತ್ರವಾದ ದೇಶದಲ್ಲಿ ಜನಿಸಿ ಉನ್ನತ ಸಂಸ್ಕೃತಿಯನ್ನು ರಕ್ತಗತವಾಗಿ ಗಳಿಸಿಕೊಂಡಿದ್ದೇವೆ ಎಂಬ ಕೃತಜ್ಞತೆಯೂ ಕೆಲವರಿಗಿಲ್ಲ ದೇಶವನ್ನೇ ತಿನ್ನುವ ಕಾಯಕದಲ್ಲಿ ತೊಡಗುತ್ತಾರೆ. ಇದೊಂದು ಮಾನವ ಅನಿಸಿದವನಿಗೆ ಶೋಭಿಸುವ ಕಾರ್ಯವಲ್ಲ.

ಒಂದು ಹಿಡಿ ಅನ್ನ ಹಾಕಿದರೆ ಸಾಯುವವರೆಗೂ ನಾಯಿ ಮರೆಯಲಾರದು. ಕಂಡಾಗ ಬಾಲ ಅಲ್ಲಾಡಿಸುತ್ತದೆ. ಪ್ರಾಣಿಗಿಂತ ತಾನು ಮೇಲೆನ್ನುವ ಬುದ್ಧಿವಂತನಗಿರುವ ಮನುಜ ಬದುಕಿಗೆ ಜೀವರಸವಾದ ಎದೆಹಾಲು ಕುಡಿದುದನ್ನು ಮರೆಯುವನಲ್ಲವೆ ! ಕಾಲ ಹಾಳಾಯಿತೆಂದು ಶಪಿಸುವುದು ಯಾಕೆ? ಮನುಷ್ಯ ನಾಗರಿಕನಾಗುತ್ತ ಹೋದಂತೆ ಮಾನವೀಯ ಮೌಲ್ಯಗಳನ್ನು ಕಳೆದು ಕೊಳ್ಳುತ್ತಿದ್ದಾನೆ. ಮತದಾರರನ್ನು ಬಂದುಕಾಲು ಹಿಡಿದುಕೊಳ್ಳುವ ಆಳುವ ಮಂದಿ ಗೆದ್ದು ಬಂದ ಮೇಲೆ ಮತದಾರರನ್ನು ಮರೆಯುತ್ತಾರೆ. ಸರಕಾರಿ ಉದ್ಯೋಗದ ಖುರ್ಚಿಯಲ್ಲಿ ಕುಳಿತ ನೌಕರರು ತಾನು



ತಿನ್ನುವ ಅನ್ನವನ್ನು ನೀಡುವ ಧಣಿ ಶ್ರೀ ಸಾಮನ್ಯನೆಂಬುದನ್ನು ನೆನಪಿಡದೆ ಸತಾಯಿಸುತ್ತಾರೆ. ಹೀಗೆ ನೆನಪಿನ ಶಕ್ತಿಯಿಂದ ವಂಚಿತನಾಗುವ ಮನುಷ್ಯನಲ್ಲಿ ಸ್ವಾರ್ಥಲಾಲಸೆ ಮನೆಮಾಡಿದರೆ ಉಂಡ ಮನೆ ಎರಡೆಣಿಸುವ ಕೆಟ್ಟ ಬುದ್ಧಿ ಅವನಲ್ಲಿ ಕಾಣಿಸುತ್ತದೆ.

ಉಪಕಾರ ಸ್ಮರಣೆ ಮಾನವನಲ್ಲಿ ಇರಲೇಬೇಕಾದ ಸದ್ಗುಣ. ಹೊತ್ತ ಭೂಮಿಯಿಂದಾರಂಭಿಸಿ ಆತನ ಈ ಬದುಕಿಗೆ ಸೃಷ್ಟಿ ಕರ್ತನ ಯಾವೆಲ್ಲ ವೈವಿಧ್ಯಮಯ ಕೊಡುಗೆಗಳು ಕಾರಣವಾಗಿವೆಯೋ ಅದೆಲ್ಲದಕ್ಕೂ ಆತ ಋಣಿಯಾಗಿರಲೇ ಬೇಕು. ಇದು ಭಗವಂತನಿಗೆ ಪ್ರೀತಿದಾಯಕ ವಿಷಯ. ತಾನು ಹೇಗೆ ಬೆಳೆದು ಬಂದೆ ಎಂಬುದನ್ನು ನೆನಪಿರಿಸಿ, ತನ್ನ ಉದ್ಧಾರಕ್ಕೆ ಕಾರಣರಾದವರಿಗೆ ಕೃತಜ್ಞನಾಗಿ, ಅಪಕಾರ ಮಾಡಿದವರನ್ನು ಮರೆತರೆ ಆತ ಸತ್ಕರ್ಮ ಮಾಡಬಲ್ಲ. ಅದರಿಂದ ಸಿಗುವ ಪುಣ್ಯವನ್ನು ಬಾಚಿಕೊಳ್ಳಬಲ್ಲ.

---

## ವಚನ

### ವಿಶ್ವ ಪ್ರಂಪಚ. ಸೃಷ್ಟಿ

ಆಯ್ಯಾ, ನೀನು ನಿರಾಳ ನಿರ್ಮಾಯನಾಗಿಪ್ಪೆಯಾಗಿ, ಆಕಾಶಪ್ರಕಾಶವಿಲ್ಲದಂದು, ಸಾಕ್ಷಿಸಭೆಗಳಿಲ್ಲದಂದು, ಸಚರಾರಚವೆಲ್ಲ ರಚನೆಗೆ ಬಾರದಂದು, ಆಧಾರದೊಳಗಣ ವಿಭೂತಿಯನೆ ತೆಗೆದು ಭೂಮಿಯ ನೆಲೆಗೊಳಿಸೆ, ಪಂಚಾಶತ್ಕೋಟಿ ವಿಸ್ತೀರ್ಣ ಭೂಮಂಡಲಕ್ಕೆ ಸುತ್ತಿ ಹರಿದವು ಸಪ್ತ ಸಾಗರಂಗಳು. ಎಂಬತ್ತಾರು ಕೋಟಿಯುಂ ತೊಂಬತ್ತೇಳು ಲಕ್ಷ ಕಾಲ ಭುವನಮಂಡಲಕ್ಕೆ ಉದಯ ಬ್ರಹ್ಮಾಂಡ. ಐವತ್ತಾರು ಕೋಟಿ ತಾರಾಮಂಡಲವೆಂದಡೆ ಬೆಳಗಿ ತೋರಿದ ಹನ್ನೆರಡು ಜ್ಯೋತಿಯ; ನಿಲಿಸಿ ತೋರಿದ ಹದಿನಾಲ್ಕು ಭುವನವ! ಈ ಜಗದ ಜಂಗುಳಿಯ ಕಾವ ಗೋವಳ ತಾನಾಗಿ, ಚೌರಾಸಿ ಲಕ್ಷ ಜೀವರಾಸಿಗಳಿಗೆ ರಾಸಿವಾಳ ತಾನಾಗಿ, ಸಕಲದ ಅಳಿವಿನ ಉಳಿವಿನ ನಿಂದ ನಿಜದ ನಿಲವ ನೋಡಿ ಕಂಡೆನು ; ಗೊಹೇಶ್ವರಾ ನಿಮ್ಮ ಶ್ರೀ ಪಾದಕ್ಕೆ ನಮೋ ನಮೋ ನಮೋ ಎನುತಿರ್ದೆನು.

– ಅಲ್ಲಮಪ್ರಭು

ಧರಣಿಯ ಪಸರಿಸಿ ಉರಗನನಡಿಯಿಟ್ಟು ಶರಧಿ ಏಳಕ್ಕೆ ಎರೆದೆನು ಒಕ್ಕುಡಿತೆ ಉದಕವ. ಹರಿಯಜನಸುರರಿಗೆ ಪರಿಪರಿಯ ಲೋಕವ ಕೊಟ್ಟು ಅರಿಯದಂತಿರ್ದ ಕಾಣಾ ರಾಮನಾಥ.

ದೇವರದಾಸಿಮಯ್ಯ

# ಮೇಧಾವಿಗಳ ಮಾತು

● ಬಿಂಡಿಗ ನವಿಲೆ ಭಗವಾನ್, ಪ್ರಾಂಶುಪಾಲರು, ಕೊಂ. ಪ. ಪೂ. ಕಾಲೇಜು, ದೊಡ್ಡಬಳ್ಳಾಪುರ, ಬೆಂಗಳೂರು ಜಿಲ್ಲೆ.

---

ಮಾತು ಬೆಳ್ಳಿ, ಮೌನ ಬಂಗಾರ ಎಂಬ ಮಾತುಂಟು. ಹಿತಮಿತವಾದ ನೇರ ಮಾತು ವ್ಯಕ್ತಿತ್ವಕ್ಕೆ ಕಳಶಪ್ರಾಯವಾಗಿರುತ್ತದೆ. ಮಾತು ಬಲ್ಲವನಿಗೆ ಜಗಳವಿಲ್ಲ ಗಾದೆ ಜನಪ್ರಿಯ. ಮೇಧಾವಿಗಳ ಜೀವನದಲ್ಲಿನ ಕೆಲವು ಪ್ರಸಂಗಗಳು ಸ್ವಾರಸ್ಯವಷ್ಟೇ ಅಲ್ಲ ಅವುಗಳ ಹಿಂದಿನ ಆಶಯವೂ ಅಷ್ಟೇ ಅನನ್ಯ. ಬ್ರಿಟನ್ನಿನ ಪ್ರಧಾನಿಯಾಗಿದ್ದ ಚರ್ಚಿಲ್ ಹೇಳುತ್ತಿದ್ದರಂತೆ. "ಮಾತನಾಡಿದೆನೆಂದು ನಾನು ಎಷ್ಟೋ ಬಾರಿ ಪರಿತಪಿಸಿದ್ದೇನೆ, ಆದರೆ ಮಾತನಾಡಲಿಲ್ಲವಲ್ಲ ಎಂದು ಒಮ್ಮೆಯೂ ನಾನು ಪರಿತಪಿಸಿದ್ದಿಲ್ಲ" ಬಸವರೇಣ್ಯರು ಹನ್ನೆರಡನೆ ಶತಮಾನದಲ್ಲೇ "ನುಡಿದರೆ ಮುತ್ತಿನ ಹಾರದಂತಿರಬೇಕು, ಮಾಣಿಕ್ಯದ ದೀಪ್ತಿಯಂತಿರಬೇಕು, ಸ್ಪಟಿಕದ ಸಲಾಕೆಯಂತಿರಬೇಕು, ಲಿಂಗಮೆಚ್ಚಿ ಅಹುದಹುದೆನ್ನಬೇಕು, ನುಡಿಯೊಳಗಾಡಿ ನಡೆಯದಿದ್ದೊಡೆ ಕೂಡಲ ಸಂಗಮ ದೇವನೊಲಿವನೆಂತಯ್ಯ" ಎಂಬ ಸಾರ್ವಕಾಲಿಕ ನೀತಿಸೂತ್ರವನ್ನು ಜಗತ್ತಿಗೇ ಕೊಟ್ಟಿದ್ದಾರೆ.

ಭಾರತದ ಗವರ್ನರ್ ಜನರಲ್ ಆಗಿದ್ದ ಶ್ರೀ. ಸಿ. ರಾಜಗೋಪಾಲಾಚಾರಿ (ರಾಜಾಜಿ) ಒಮ್ಮೆ ತಮ್ಮ ಬೂಟಗೆ ಪಾಲೀಷು ಹಾಕುತ್ತಿದ್ದರು. ಅವರ ಗೆಳೆಯರೊಬ್ಬರು ಇದನ್ನು ಕಂಡು ಚಕಿತರಾಗಿ ಕೇಳಿದರು.

"ಇದೇನು ಸಾರ್, ನಿಮ್ಮ ಬೂಟಗೆ ನೀವೇ ಪಾಲೀಷು ಹಾಕುತ್ತಿದ್ದೀರಲ್ಲ?" ಅದಕ್ಕೆ ರಾಜಾಜಿಯ ಉತ್ತರ ಸಿದ್ಧವಾಗಿಯೆ ಇತ್ತು. ಅವರೆಂದರು.

"ಹೌದು - - - - - ನೀವು ಯಾರ ಬೂಟಗೆ ಪಾಲೀಷು ಹಾಕುತ್ತೀರಿ ?"

ನೂರಾರು ಆವಿಷ್ಕಾರಗಳನ್ನು ತನ್ನ ಸತತ ಶ್ರಮ, ಅಧ್ಯಯನದಿಂದ ವಿಜ್ಞಾನವಿಶ್ವಕ್ಕೆ ಧಾರೆಯೆರೆದ ಅಮೆರಿಕಾದ ಥಾಮಸ್ ಆಲ್ವಾ ಎಡಿಸನ್ ಗ್ರಾಮ್ಯಫೋನ್ ಕಂಡುಹಿಡಿಯಲು ಪಟ್ಟ ಪಾಡು ಹೇಳತೀರದು. ಆತ ಅದಕ್ಕಾಗಿ ಒಂಭೈನೂರು ಪ್ರಯೋಗಗಳಲ್ಲಿ ವಿಫಲನಾಗಬೇಕಾಯಿತು. ತುಂಟನೊಬ್ಬ ಎಡಿಸನ್ನನನ್ನು ಗೇಲಿ ಮಾಡಿದನಂತೆ,

"ನೀವು ಗ್ರಾಮ್ಯಫೋನ್ ಕಂಡುಹಿಡಿಯುವ ಮುನ್ನ ಒಂಭೈನೂರು ಪ್ರಯೋಗಗಳಲ್ಲಿ ಸೋತರಂತೆ ನಿಜವೆ ?"

ಅದಕ್ಕೆ ಎಡಿಸನ್ ಮಹಾನುಭಾವ ಇತ್ತ ಉತ್ತರ ಎಷ್ಟೊಂದು ಮಾರ್ಮಿಕ ಗಮನಿಸಿ.

ನಾನು ಅಷ್ಟು ಬಾರಿ ವಿಫಲನಾದೆನೆಂದು ನಿಮಗೆ ಯಾರು ಹೇಳಿದ್ದು. ಒಂಭೈನೂರು ವಿಧಾನಗಳು ಧ್ವನಿ ಪುನರುತ್ಪಾದನೆಗೆ ಸರಿಯಿಲ್ಲವೆಂದು ನಾನು ಸಾಧಿಸಿ ತೋರಿಸಿದೆನಲ್ಲ !



ಎಡಿಸನ್ನನಿಗಿದ್ದ ಪ್ರಯತ್ನಶೀಲತೆ, ಛಲ, ಶ್ರದ್ಧೆಗಳಿಗೆ ಇದಕ್ಕಿಂತ ಉದಾಹರಣೆ ಬೇಕೆ ?

ಚರ್ಚಿಲ್ ಯಾವಾಗಲೂ ಜಾಣತನದ ಮಾತಿಗೆ ಇನ್ನೊಂದು ಹೆಸರು. ಅವರಿಗೆ ಖ್ಯಾತ ನಾಟಕಕಾರ ಬರ್ನಾಡ್ ಷಾ ಒಂದು ಆಹ್ವಾನವಿತ್ತಿದ್ದು ಹೀಗೆ.

"Sir, Please attend the noon show of my new drama with your friends if any"

ಚರ್ಚಿಲ್ ವಿಚಲಿತರಾಗದೆ ಷಾಗೆ ಒಡನೆಯೆ ಬರೆದ ಪತ್ರದ ಒಕ್ಕಣೆ ಹೀಗಿತ್ತು.

Sir, owing to some private work I will not be able to attened the noon-show but, I shall attend the evening show if any....

ಅಮೇರಿಕಾದ ಅಧ್ಯಕ್ಷರಾಗಿದ್ದ ಅಬ್ರಹಾಂ ಲಿಂಕನ್‌ಗೆ ಒಂದು ಸಮಾರಂಭದಲ್ಲಿ ಸಭಿಕನಿಂದ ಬಂದ ಪ್ರಶ್ನೆ.

"ಸಾರ್, ನಿಮ್ಮ ಪ್ರತಿಮೆಯನ್ನೇಕೆ ಯಾರೂ ಸ್ಥಾಪಿಸಿಲ್ಲ" "ನಾನು ನಿಜಕ್ಕೂ ಅದೃಷ್ಟವಂತ. ಸದ್ಯ, ಇಂತಹ ಪ್ರಶ್ನೆ ನಿಮ್ಮ ಪ್ರತಿಮೆಯನ್ನೇಕೆ ಸ್ಥಾಪಿಸಿದರು ಎನ್ನುವುದಕ್ಕಿಂತ ಮಿಗಿಲು"

ಕನ್ನಡದ ಆಸ್ತಿಯೆಂದೇ ಹೆಸರುಗಳಿಸಿದ್ದ ಡಾ|| ಮಾಸ್ತಿಯವರು ಸಮಾರಂಭವೊಂದಕ್ಕೆ ಅತಿಥಿಯಾಗಿದ್ದರು. ಸ್ವಾಗತ ಭಾಷಣ ಮಾಡಿದಾತ ಅವರನ್ನು ಸ್ವಾಗತಿಸಿದ್ದು ತಪ್ಪು ತಪ್ಪಾದ ಇಂಗ್ಲೀಷ್‌ನಲ್ಲಿ. ಮಾಸ್ತಿಯವರಿಗೆ ಸಿಟ್ಟೇರದಿದ್ದೀತೆ? ಅವರು ತಮ್ಮ ಭಾಷಣದಲ್ಲಿ ಹೀಗೆ ತರಾಟೆಗೆ ತೆಗೆದುಕೊಂಡರು.

"ಸ್ವಾಗತ ಮಾಡಿದವರ ಬಗ್ಗೆ ನನಗೆ ತುಂಬಾ ಕನಿಕರವಿದೆ. ಪಾಪ, ಅವರು ಇಂಗ್ಲಿಷಿನಲ್ಲಿ ಮಾಡಿದ ತಪ್ಪನ್ನು ಕನ್ನಡದಲ್ಲೇ ಮಾಡಬಹುದಿತ್ತಲ್ಲ."!

ಅಂದ ಹಾಗೆ ನನ್ನ ಪ್ರಾಣಿವೈದ್ಯ ಮಿತ್ರರೊಬ್ಬರನ್ನು ಅವರ ಗೆಳೆಯರು ಕಂಡಾಗೆಲ್ಲಾ ಕೇಳುತ್ತಿದ್ದ ಪ್ರಶ್ನೆ "ನೀವು ದನದ ಡಾಕ್ಟ್ರಂತೆ ಹೌದೆ ?" ಕಡೆಗೊಂದು ದಿನ ನನ್ನ ವೈದ್ಯಮಿತ್ರ ಕೋಪದಿಂದ ಹೀಗೆಂದನಂತೆ,

"ಹೌದು........................ನಿಮಗೇನಾಗಿದೆ ಬೇಗ ಹೇಳಿ"

ಹಾಗೆಂದ ಮಾತ್ರಕ್ಕೆ ಎದುರಾಳಿಯನ್ನು ಮಾತಿನ ಬಾಣದಿಂದ ಮರುಪಾಳಿ ಮಾಡಬೇಕೆಂದೇನೂ ಅಲ್ಲ. ಮಾತಿಗೆ ಎಂತಹ ಸತ್ತ್ವ ಶಕ್ತಿಯಿದೆಯೆನ್ನುವುದನು ನಾವು ಮನಗಾಣಬೇಕಷ್ಟೆ. ●

# ವಿಶ್ವದಲ್ಲಿ ಭಾರತೀಯ ಸಂಸ್ಕೃತಿ-4

ಎಚ್.ಎಸ್. ನರಸಿಂಹ ಜೀಯರ್, 14ನೇ ಕ್ರಾಸ್, ಲಕ್ಷ್ಮಯ್ಯ ತೋಟ, ಸೋಮೆಶ್ವರಪುರಂ,
ತುಮಕೂರು-2.

ಅಮೇರಿಕಾದ ಸುಪ್ರಸಿದ್ಧ ವಿಚಾರಶೀಲ ಸಾಹಿತ್ಯಕಾರನಾದ Will Durant ಮಹಾಶಯನು ಯೂರೋಪ್ ದೇಶಗಳಿಗೆ ಭಾರತೀಯ ಸಂಸ್ಕೃತಿಯ ಕೊಡುಗೆಯ ಬಗ್ಗೆ ವರ್ಣಿಸಿರುವುದನ್ನು ನಾವು ಪರಿಶೀಲಿಸಿದಾಗ ಆದೇಶಗಳ ಕೃತಜ್ಞತೆಯನ್ನು ಅರಿಯ ಬಹುದಾಗಿದೆ. ಅವನ ವಾಕ್ಯಗಳಲ್ಲಿಯೇ ನೋಡಿ ಸಾರಾಂಶ ಪರಿಶೀಲಿಸೋಣ 'India was the Mother land of our race, and Sanskrit the mother of Europes languages, she was the mother of our philosophy; mother; through the Arabs, of much of our mathematics, mother, through the Buddha, of the ideals embodied in Christianity, mother, through the Village Community, of self Government and democracy. Mother India is in many ways the mother of us all.' ಯೂರೋಪ್ ದೇಶಗಳ ವಂಶಜರಿಗೆ ಭಾರತವೇ ತಾಯಿನಾಡು,' ಈ ದೇಶಗಳ ಭಾಷೆಗಳಿಗೆ ಸಂಸ್ಕೃತವೇ ಮೂಲ, ಅವರ ತತ್ವಜ್ಞಾನದ ತವರೂರು ಭಾರತ, ಗಣಿತಶಾಸ್ತ್ರದ ಹೆಚ್ಚಿನ ವಿಷಯಗಳಿಗೆಲ್ಲಾ ಭಾರತವೇ ನಮಗೆ ಅರಬ್ ದೇಶಗಳ ಮುಖಾಂತರ ಕೊಟ್ಟವರದಾನ, ನಮ್ಮ ಕ್ರಿಶ್ಚಿಯನ್ ಧರ್ಮದ ಬಹುಪಾಲು ತತ್ವಗಳು ಬುದ್ಧ ಮಹಾಶಯನಿಂದ ನಮಗೆ ಬಂದದ್ದು, ಪ್ರಜಾಪ್ರಭುತ್ವ ಹಾಗೂ ಹಳ್ಳಿಯ ಪಂಚಾಯಿತಿ ಪದ್ಧತಿಗಳನ್ನು ಭಾರತದಿಂದಲೇ ಕಲಿತಿದ್ದೇವೆ, ಹೀಗಾಗಿ ಭಾರತದೇಶವು ನಮ್ಮೆಲ್ಲರಿಗೂ ಅನೇಕ ವಿಚಾರಗಳಲ್ಲಿ ಮಾತೃ ದೇವತೆ ಎಂಬುದು (ಡ್ಯೂರೆಂಟ್ ರವರ ಅಭಿಪ್ರಾಯ) ನಮ್ಮ ಭಾರತೀಯ ಸಂಸ್ಕೃತಿಯ ಅನ್ಯದೇಶಗಳಲ್ಲಿ ಬೀರಿರುವ ಪ್ರಭಾವಕ್ಕೆ ಇದಕ್ಕಿಂತ ಹೆಚ್ಚಿನ ಉದಾಹರಣೆ ಮತ್ತೇನುಬೆ.ಕು.

ಇತ್ತೀಚಿನ ಸಂಶೋಧನಕಾರರೂ, ವಿಶ್ವ ಇತಿಹಾಸ ರಚನಕಾರರೂ, Institu of re-writing Indian History ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಪಿ.ಎನ್. ಓಕ್ ಮಹಾಶಯರು ಪಾಶ್ಚಾತ್ಯ ದೇಶಗಳನ್ನೆಲ್ಲಾ ಪ್ರವಾಸಮಾಡಿ ಚರಿತ್ರೆ ಸಂಬಂಧಿಸಿದ ಅನೇಕ ವಿಷಯಗಳನ್ನು ಸಂಶೋಧನೆಮಾಡಿ, ಸಂಗ್ರಹಿಸಿ ಹೊಸ ಹೊ ವಿಚಾರಗಳನ್ನು ಬೆಳಕಿಗೆ ತಂದಿದ್ದಾರೆ. ಪೋಪ್ ಜಗದ್ಗುರುಗಳು ವಾಸವಾಗಿರ ಇಟಲಿಯಲ್ಲಿನ ವ್ಯಾಟಿಕನ್ ಸಿಟಿಯ ಬಗ್ಗೆ ನಡೆಸಿದ ಸಂಶೋಧನೆಗಳು ಈರೀತಿ ಇ



ರೋಂ ನಗರದ ಈ ವ್ಯಾಟಿಕನ್ ಸಿಟಿಯಲ್ಲಿ ಪೋಪ್ ಬಿಷಪ್‌ರವರನ್ನು ಸಂಸ್ಥಾಪಿಸು ವುದಕ್ಕೆ ಮುಂಚೆ ಇದು ಭಾರತೀಯ ಸಂಸ್ಕೃತಿಯ ವೇದ ಪರ್ಣಶಾಲೆ ಅಥವಾ ಪಾಠ ಶಾಲೆಯಾಗಿತ್ತು ಸಂಸ್ಕೃತದಲ್ಲಿ ವಾಟಿಕಾ ಅಂದರೆ ಪರ್ಣಶಾಲೆ.

ಶ್ರೀ ಪಿ. ಎನ್. ಓಕ್‌ರವರು ಸಂಶೋಧನೆಗಳನ್ನು ಪರಿಶೀಲಿಸಿ ಗಮನಿಸಿದ ಭಾರತೀಯ ಮೂಲದ ಹಾಗೂ ಇಂಗ್ಲೆಂಡಿನಲ್ಲಿರುವ ಡಾ|| ಆರ್. ಎಲ್. ಗೋಯಲ್ ರವರು ಜಗದ್ಗುರು ಪೋಪ್ ಪಾಲರಿಗೆ ದಿನಾಂಕ 10-11-1686 ರಲ್ಲಿ ಬರೆದ ಪತ್ರವನ್ನು ನಾವು ಪರಿಶಿಲಿಸಿದಾಗ ಇನ್ನಷ್ಟು ವಿಚಾರಗಳು ನವಗೆ ತಿಳಿಯುತ್ತವೆ. ಈ ಪತ್ರವನ್ನು ಬೆಂಗಳೂರಿನ ಪ್ರಸಿದ್ಧ ಜ್ಯೋತಿಷಿಗಳಾದ ಶ್ರೀ ಬಿ.ವಿ. ರಾಮನ್‌ರವರು ತಮ್ಮ ಮಾಸಿಕ ಪತ್ರಿಕೆ The Astrological Magazine January 1988ರಲ್ಲಿ ಪ್ರಕಟಿಸಿದ್ದಾರೆ. ಆ ಪತ್ರದ ಪೂರ್ಣ ಒಕ್ಕಣೆ ಈ ರೀತಿ ಇದೆ.

To,
His Holiness Jhon Paul II
Vatican, Rome, Italy.

According to some recent important discoveries made by Mr.. P. N. Oak, President, Institue of re-writing Indian History, the Papacy is a Pre-Christian Vedic Priest-hoold. Papah in Sanskrit Signifies an 'Observer from sin'.

Vatican is the Sanskrit word Vatica meaning hermitage. So yours was a veda vatica, that is, a hermitage. The sistine chapel in which every new pope is elected gets its name from Sivasthan Chapah, meaning a siva Temple. The Sivalingas and images of Lord Siva Which your Pre-Christian Predecessors used to Worship have since been relegated to the Etruscan Museum in the Vatican.

The City of Rome in which the Vatican is locate is named after the incarnation Rama. Paintings

of Ramayanic episodes are found in Etruscan homes dug up in Italy. The City of Ruvanh gets its name from Rama's adversary Ravana. verona is named ofter Vedic deity Varuna.

Divinity is the Sanskrit term Deva-nity, that is, the way of life of the Devas, that is, Gods. your uncompromising Views on abortion and on divorce are of Vedic Vintage and not of the Permissive Christian Society.

According to P. N. Oak's Findings, the late Vedic Papa was slain by a neo-Convert emperor Constantine around 312 A. D. and the Bishop of Rome (a priest of the then newly formed Christian group) was installed in that hoary Prestigious, Venerable Vedic seat, as the first Christian Papa.

I trust that your Holiness will feeli mmensly by Proud of these newly discovered holy Vedic antecedents

May I therefore request your Holiness to order a through research in to the Vedic antecedents of the Papacy.

ಈ ಪತ್ರದ ಸಾರಾಂಶವೇನೆಂದರೆ "ಇನ್ಸ್ಟಿಟ್ಯೂಟ್ ಆಫ್ ರೀರೈಟಿಂಗ್ ಹಿಸ್ಟೋರಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪಿ.ಎನ್. ಓಕ್‌ರವರು ನಡೆಸಿದ ಬಹು ಮುಖ್ಯವಾದ ಇತ್ತೀಚಿನ ಸಂಶೋಧನೆಗಳ ಪ್ರಕಾರ Papacy (ಪೋಪರ ಅಧಿಕಾರಿ) ಯು ಕ್ರಿಶ್ಚಿಯನ್ ಪೂರ್ವದಲ್ಲಿ ವೇದ ಪುರೋಹಿತರ ವಶದಲ್ಲಿತ್ತು. ಸಂಸ್ಕೃತದಲ್ಲಿ "ಪಾಪಹ" ಎಂದರೆ 'ಪಾಪ' ಮಾಡದ ಆಚರಣೆಯಲ್ಲಿರುವವ ಎಂದರ್ಥ. ವ್ಯಾಟಿಕನ್ ಎಂಬುದು ಸಂಸ್ಕೃತ ಪದ. ವಾಟಿಕ ಅಂದರೆ ಪರ್ಣಶಾಲೆ (hermitage) ಆಶ್ರಮ ಅಥವಾ ಮಠ, ಆದ್ದರಿಂದ ನಿಮ್ಮ ವ್ಯಾಟಿಕನ್ ಸಿಟಿಯು ವೇದ ಪರ್ಣಶಾಲೆಯಾಗಿತ್ತು.



ಪ್ರತಿಸಾರಿಯೂ ಹೊಸ ಜಗದ್ಗುರು ಪೋಪರನ್ನು ಚುನಾಯಿಸುವ "ಸಿಸ್ಟೀನ್ ಚಾಪೆಲ್ ಎಂಬ ಸ್ಥಳದ ಹೆಸರು "ಶಿವಸ್ತಾನ್ ಚಾಪಹ" ಅಥವಾ ದೇವಾಲಯ ಎಂಬುದರಿಂದ ಬಂದದ್ದು. (ಸಿಸ್ಟೀನ್-ಶಿವಸ್ತಾನ್ ಚಾಪೆಲ್ ಅಂದರೆ ದೇವಾಲಯ) ನಿಮ್ಮ ಹಿಂದಿನ ಅಂದರೆ ಕ್ರಿಶ್ಚಿಯನ್ ಧರ್ಮಕ್ಕೂ ಹಿಂದೆ ಇದ್ದ ನಿಮ್ಮ ಪೂರ್ವಾಧಿಕಾರಿಗಳು ಆಗ ಪೂಜಿಸುತ್ತಿದ್ದ ಶಿವಲಿಂಗಗಳು ಮತ್ತು ಮೂರ್ತಿಗಳನ್ನು ವ್ಯಾಟಿಕನ್‌ನಲ್ಲಿರುವ ಎಟ್ರೊಸ್ಕ್ಯಾನ್ ಮ್ಯೂಸಿಯಂಗೆ ಸ್ಥಳಾಂತರಿಸಲಾಗಿದೆ.

ವ್ಯಾಟಿಕನ್ ಸಿಟಿ ಇರುವ ರೋಂ ನಗರವು ಅವತಾರಪುರುಷ ರಾಮನ ಹೆಸರಿನಲ್ಲಿದೆ. ಇದಕ್ಕೆ ಆಧಾರವೆಂದರೆ ಇತ್ತೀಚೆಗೆ ಇಟಲಿಯ ಎಟ್ರೊಸಾನ್ ಮನೆಗಳನ್ನು ಅಗೆದು ಶೋಧಿಸಿದಾಗ ರಾಮಾಯಣದ ಅನೇಕ ಉಪಾಖ್ಯಾನಗಳ (episodes) ವರ್ಣರಂಜಿತ ಚಿತ್ರಗಳು ದೊರೆತಿವೆ. ರವೋನ ಎಂಬ ನಗರದ ಹೆಸರು ರಾಮನ ಶತ್ರು ರಾವಣನ ಹೆಸರಿನಲ್ಲಿದೆ. ವೆರೋನ ಎಂಬ ನಗರದ ಹೆಸರು ವೇದಗಳಲ್ಲಿ ಬರುವ ದೇವತೆ "ವರುಣ"ನ ಹೆಸರಾಗಿದೆ.

Divinity ಎಂಬ ಪದವು ಸಂಸ್ಕೃತ ಪದವಾದ Deva-nity (ದೇವ ನೀತಿ) ಅಂದರೆ ದೇವತೆಗಳ ಜೀವನ ವಿಧಾನ ಎಂದು.

ತಾವು ಗರ್ಭಪಾತ ಹಾಗೂ ಡೈವೋರ್ಸ್ ಬಗೆಗೆ ಒಪ್ಪಿಗೆ ಕೊಡದಿರುವುದು ವೇದಗಳ ಮೂಲದ್ದು; ಕ್ರಿಶ್ಚಿಯನ್ ಸಮಾಜದ್ದಲ್ಲ.

ಶ್ರೀ ಪಿ.ಎನ್. ಓಕ್‌ರವರ ತೀರ್ಮಾನದ ಪ್ರಕಾರ ಸುಮಾರು ಕ್ರಿ.ಶ. 312ರಲ್ಲಿ ಕ್ರಿಶ್ಚಿಯನ್ ಧರ್ಮಕೆ ಹೊಸದಾಗಿ ಸೇರಿದ ಕಾನ್‌ಸ್ಟ್ಯಾನ್‌ಟೈನ್ ಚಕ್ರವರ್ತಿಯ ವ್ಯಾಟಿಕನಲ್ಲಿ ಹಿಂದೆ ಇದ್ದ ವೇದ ಗುರುಗಳನ್ನು ಕೊಂದು ಪ್ರಖ್ಯಾತವಾದ ಹಾಗೂ ಪೂಜ್ಯವಾದಂತಹ ವ್ಯಾಟಿಕಾಲದಲ್ಲಿ ಕ್ರಿಶ್ಚಿಯನ್ ಗುಂಪಿನ ಪ್ರಥಮ ಬಿಷಪ್ಪನನ್ನು ಕೂ ಮಿಸಿದನು.

ಈ ಆವಿಷ್ಕಾರಗಳಿಂದ ವಾಟಿಕನ್ ಸಿಟಿಯ ಬಗ್ಗೆ ಗೊತ್ತಾದ ಪೂರ್ವೋತ್ತರಗಳ ಬಗ್ಗೆ ಪೂಜ್ಯರಾದ ತಾವು ಅಪರಿಮಿತವಾಗಿ ಹೆಮ್ಮೆ ಪಡುತ್ತಾರೆಂಬುದಾಗಿ ನಂಬಿದ್ದೇನೆ.

ಈಗ ಪೂಜ್ಯರಾದ ತಮ್ಮಲ್ಲಿ ವಿಜ್ಞಾಪನೆ ಏನೆಂದರೆ ಪೋಪರ ಸ್ಥಾನದ ವೇದ ಸಂಬಂಧ ಪೂರ್ವೋತ್ತರಗಳ ಬಗ್ಗೆ ಸಂಶೋಧನೆ ನಡೆಸಲು ಅಪ್ಪಣೆ ಮಾಡಬೇಕೆಂದು ಕೋರುತ್ತೇನೆ.

ಈ ಪತ್ರಕ್ಕೆ ಪೋಪ್ ಜಗದ್ಗುರುಗಳಿಂದ ಈ ವರೆವೆಗೆ ಯಾವ ಪ್ರತಿಕ್ರಿಯೆಯೂ ಬಂದ ಬಗ್ಗೆ ವರದಿಯಾಗಿಲ್ಲ. ●

## ಕ್ಷೇತ್ರವಾರ್ತೆ

* ಹೆಚ್. ಬಿ. ಗಂಗಾಧರಯ್ಯ.

### ಶ್ರೀ ಶ್ರೀ ಉದ್ದಾನಶಿವಯೋಗಿಗಳ ಪುಣ್ಯಾರಾಧನೆ.

15 ಜನವರಿ ಸೋಮವಾರ 1996 ಶ್ರೀ ಸಿದ್ಧಗಂಗೆಯ ಸೇವಾ ಜ್ಯೋತಿಗೆ ಎಣ್ಣೆ ಬತ್ತಿ ಒದಗಿಸಿದ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ 55ನೇ ಪುಣ್ಯಾ-ರಾಧನೆಯನ್ನು ಶ್ರದ್ಧಾ ಭಕ್ತಿಯಿಂದ ಆಚರಿಸಲಾಯಿತು.

ಜ್ಯೋತಿಬೆಳಗುವುದರೊಂದಿಗೆ ಮೈಸೂರು ಜಿಲ್ಲೆ, ಬೆಟ್ಟದಪುರದ ಪೂಜ್ಯ ಶ್ರೀ ಶ್ರೀ ಚನ್ನಬಸವದೇಶೀಕೇಂದ್ರಸ್ವಾಮಿಗಳು ಉದ್ಘಾಟಿಸಿದರು. ಇಂದು ಸಂಕ್ರಾಂತಿ. ಇದರ ಅರ್ಥ ಹಠಾತ್ ಬದಲಾವಣೆ. ಶ್ರೀ ಮಠದಲ್ಲಿ ಅಂಥಹ ತೀವ್ರ ಬದಲಾವಣೆಯನ್ನು ಶ್ರೀ ಶ್ರೀ ಉದ್ದಾನಶಿವಯೋಗಿಗಳು ಮಾಡಿದ್ದರು. ಅದೇ ಶಿಕ್ಷಣದ ಸಂಕ್ರಾಂತಿ. ಜನತೆಯನ್ನು ಉತ್ತಮ ವ್ಯಕ್ತಿಗಳನ್ನಾಗಿ ರೂಪಿಸುವುದು ಅವರ ಸಂಕಲ್ಪವಾಗಿತ್ತು. ದೇವರನ್ನು ಕಾಣುವುದು ಸುಲಭ. ಜಗತ್ತಿಗೆ ದೇವರಿದ್ದಾನೆ ಎಂದು ತಿಳಿಸುವುದು ಕಷ್ಟ, ಕಂಡ ಸತ್ಯವನ್ನು ಜಗತ್ತಿಗೆ ಸಾರಿದ್ದಾರೆ. ಅವರಲ್ಲಿ ಗುರುತಿಸುವ ಶಕ್ತಿ ಅದ್ಭುತ-ವಾದುದು. ಉದಾ. ಶ್ರೀ ಮಠದ ಕೀರ್ತಿಯನ್ನು ಮೇರು ಸದೃಶಕ್ಕೇರಿಸಿದ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರನ್ನು ಆಯ್ಕೆ ಮಾಡಿದ್ದು. ಕರ್ತೃತ್ವ ಶಕ್ತಿ, ದೂರದೃಷ್ಟಿ, ವಿಚಾರವಂತಿಕೆ ವಿಪುಲವಾಗಿತ್ತು. ಕರ್ನಾಟಕಕ್ಕೆ ವರಪ್ರಸಾದವಾಗಿದ್ದಾರೆ ಎಂದು ಸ್ಮರಿಸಿದರು.

ಬೆಂ. ಜಿಲ್ಲೆ ಕಂಚುಗಲ್ ಬಂಡೇಮಠದ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಮಾತ-ನಾಡಿ ಅವರ ಪೂಜಾ ವ್ಯವಸ್ಥೆ ಮರಿಯಾಗಿ ಅನುಭವಗಳನ್ನು ಹೇಳಿದರು. ಸ್ವಯಂ ಶಕ್ತಿ ಬೆಳವಣಿಗೆ ಮುಖ್ಯ. ಇದಕ್ಕಾಗಿ ಅನುಷ್ಠಾನ ಮಾಡಲು ಶ್ರೀ ಶ್ರೀಗಳಿಗೆ ಪ್ರತ್ಯೇಕ ಪೂಜೆಗೆ ವ್ಯವಸ್ಥೆ ಮಾಡಿದರು. ಅವರು ತ್ರಿಕಾಲ ಜ್ಞಾನಿಗಳು. ನನ್ನ ಕೈನೋಡಿ ಎಂದೆ. ನೋಡಿ ಮನಸ್ಸು ಚಂಚಲವಾಗಿದೆ ಬಿಗಿಹಿಡಿ ಎಂದರು. ಪುರುಷ ಪ್ರಯತ್ನವೇ ದೊಡ್ಡದು. ದೈವಪ್ರಯತ್ನವಲ್ಲ ಎಂಬ ನಂಬಿಕೆಯುಳ್ಳವರು. ವಿದ್ಯಾರ್ಥಿಗಳಲ್ಲಿ ವಾಕ್ಪಟುತ್ವ ಬೆಳೆಸಲು ಚರ್ಚಾಸ್ಪರ್ಧೆಗಳನ್ನು ಏರ್ಪಡಿಸಿ ಪ್ರೋತ್ಸಾಹಿಸುತ್ತಿದ್ದರು. ಅವರು ತಪ್ಪುಮಾಡಿದವರಿಗೆ ನೀಡುತ್ತಿದ್ದ ಶಿಕ್ಷೆಯೆಂದರೆ ಕೆಂಜಿರುವೆ ಗೂಡಿನ ಮೇಲೆ ನಿಲ್ಲಿ-ಸುವುದು ಎಂದು ನಗುತ್ತಾ ಸ್ಮರಣೆಗೈದರು.

ಮೈಸೂರಿನ ಮಾಜಿ ಶಾಸಕರಾದ ಶ್ರೀ ಹೆಚ್. ಗಂಗಾಧರನ್ ಉಪನ್ಯಾಸ ನೀಡಿ 12ನೇ ಶತಮಾನದಲ್ಲಿ ಹರದನಹಳ್ಳಿ 12ನೇ ಜಗದ್ಗುರು ಗೋಸಲ ಸಿದ್ದೇಶ್ವರರು ಸ್ಥಾಪಿಸಿದ ಮಠವಿದು. 'ಶ್ರೀ ಸಿದ್ಧಗಂಗೆಯನ್ನು ನಿರಂಜನ ಜಗದ್ಗುರು ಪೀಠವೆಂದು



ಕರೆಯಬೇಕು. ಇದು ಸತ್ಯ ನಿತ್ಯವಾದ ಐತಿಹಾಸಿಕ ಸಂಗತಿ. ಅನಂತರ ಶಂಕರಾ-ಚಾರ್ಯರು, ದಿವ್ಯಲಿಂಗೇಶ್ವರರು, ಚನ್ನಬಸವೇಶ್ವರರು ಅನಂತರ ಶ್ರೀ ಸಿದ್ಧಲಿಂಗೇಶ್ವರರು ಇಲ್ಲಿ ಅನುಷ್ಠಾನ ಮಾಡಿದ್ದಾರೆ. ಇವರಿಗಿಂತ 4 ತಲೆಮಾರಿನವರನ್ನು ನಾವು ಮರೆಯಬಾರದು. ಶ್ರೀ ಸಿದ್ಧಲಿಂಗೇಶ್ವರರಿಗೆ ಇಲ್ಲಿ ಸ್ಫೂರ್ತಿ ದೊರೆತದ್ದು. ಶ್ರೀ ಜಗದ್ಗುರು ಗೋಸಲ ಸಿದ್ಧೇಶ್ವರರಿಂದ. ಇಂತಹ ಪವಿತ್ರ ಪರಂಪರೆಯಿಂದ ಶ್ರೀಮಠ ಬೆಳೆದುಬಂದಿದೆ.

ಈಗಿನ ಶ್ರೀ ಶ್ರೀ ಶಿವಕುಮಾರೇಶ್ವರರು 88 ಸಂವತ್ಸರಗಳನ್ನು ಕಂಡವರು. ದೇಹಬಾಗಿದ್ದರೂ ಮನಸ್ಸು ದಿಗಂತದಂತೆ ವಿಶಾಲವಾಗುತ್ತಿದೆ. ವ್ಯಕ್ತಿತ್ವ ಎಂದರೆ 1 ಸಮಾರಂಭಗಳಲ್ಲಿ ಎಂದೂ ಕುಳಿತು ಮಾತನಾಡಿದವರಲ್ಲ.

2 ಬಸವಣ್ಣನವರ ಕಾರ್ಯಕ್ಷೇತ್ರ ವಿಸ್ತರಿಸದೆ ಭಾಷಣ ಮಾಡುವುದಿಲ್ಲ. 3 ಶರಣರನ್ನು ಏಕ ವಚನಗಳಲ್ಲಿ ಸಂಬೋಧಿಸಿಲ್ಲ. 4 ಪರಧರ್ಮಸಹಿಷ್ಣುತೆ.

ಈ ನಾಲ್ಕು ಅಂಶಗಳು ಅವರ ಆಧ್ಯಾತ್ಮಿಕ ಸಾಧನೆ ಪ್ರತಿಬಿಂಬಿಸುತ್ತದೆ. ಅವರದು ಭಾಷಣವಲ್ಲ ಸ್ಮರಣೆ. ಚಿತ್ತದ ಸಂಪತ್ತು. ಇವರು ಬಸವಣ್ಣನ ಕಲ್ಯಾಣದಲ್ಲಿ ಇದ್ದಿರಬೇಕು. ಆ ಪುಣ್ಯದ ಫಲದಿಂದ ಸಿದ್ಧಗಂಗೆಯಲ್ಲಿ ಇದ್ದಾರೆ. ಸದಾ ಕಲ್ಯಾಣದ ದೃಶ್ಯವನ್ನೇ ನೋಡುತ್ತಿರುತ್ತಾರೆ. ಕೂಡಲ ಸಂಗಮದೇವ ಜಂಗಮ ರೂಪವಾಗಿ ಕಾಣುತ್ತಿದ್ದಾರೆ.

ಇಂಥಹ ಮಹಾಶಕ್ತಿ ಕೊಟ್ಟವರು ಯಾರು ? ಪದವೀಧರರಾಗಿ ರಾಜ್ಯಮಟ್ಟದಲ್ಲಿ ಅಧಿಕಾರಿಯಾಗುತ್ತಿದ್ದವರು ಜೋಳಿಗೆ ಹಿಡಿಯುವ ಮಠಕ್ಕೆ ಸನ್ಯಾಸಿ ಮರಿಯಾದರು. ಬಡವರ ಮನೆಯಲ್ಲಿ ಪೂಜೆಮಾಡಿ ಬಡತನದ ಬೇಗೆ ಅರಿತರು.

ಗುರುಗಳಾದ ಉದ್ದಾನ ಶಿವಯೋಗಿಗಳೊಡನೆ ಹಿತವಾದ ಸಂಭಾಷಣೆ ಮಾಡಿದ ದಿನವೇ ಇಲ್ಲ. ಆದರೆ ಅಂತರಂಗದಲ್ಲಿ ತಮ್ಮ ಶಿಷ್ಯರ ಪ್ರಗತಿಯನ್ನು ಕಂಡು ಸಂತೋಷ ಪಡುತ್ತಿದ್ದರು. ಬಹಿರಂಗದಲ್ಲಿ ಪ್ರೀತಿಯಿಂದ ಮಾತಾಡುತ್ತಿರಲಿಲ್ಲ.

**ಕರ್ನಾಟಕದ ಸ್ವರಯೋಗಿ :** ೧ ಶ್ರೀ ಉದ್ದಾನ ಶಿವಯೋಗಿಗಳು ಮೂಗಿನ ಮೇಲೆ ಬೆರಳಿಟ್ಟು ಸ್ವರ ವಿಜ್ಞಾನ ಹೇಳುತ್ತಿದ್ದರು. ಸ್ವೀಕಾರ ಸುಲಭ, ವರ್ಜಿತಕಷ್ಟ. ಸಾಧನೆ ಮಾಡಿದವರಿಗೆ ಮಾತ್ರ ಸ್ವರಯೋಗ ಸಿದ್ಧಿ. 20ನೇ ಶತಮಾನದ ಸ್ವರ ಯೋಗಿಗಳ ಸ್ಮರಣೆ ಜನ್ಮಾಂತರದ ಪುಣ್ಯ.

ಅವರ ಶಿಷ್ಯರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳನ್ನು ವಿವಿಧ ಬಗೆಗಳಲ್ಲಿ ನಿರಂತರವಾಗಿ ವಿಮರ್ಶೆಮಾಡಿ ಪರೀಕ್ಷಿಸುತ್ತಿದ್ದರು. ಅವೆಲ್ಲವನ್ನೂ ದೂರದೃಷ್ಟಿಯಿಂದ ಆತ್ಮಾವಲೋಕನಮಾಡಿ ಶಾಂತಚಿತ್ತರಾಗಿ ಸಹಿಷ್ಣುತೆಮಾಡಿಕೊಂಡ ಪರಿಣಾಮವಾಗಿ ಮಹಾದಿವ್ಯಶಕ್ತಿಯಾಗಿ ಬೆಳೆದು ಲೋಕಪೂಜ್ಯರಾಗಿದ್ದಾರೆ.

ಇಂಥಹ ಪುಣ್ಯ ಮೂರ್ತಿಯನ್ನು ತಮ್ಮ ತಪೋಬಲದಿಂದ ಸಾಧನೆಮಾಡಿ ಕರುಣಿಸಿದ ಕೀರ್ತಿ ಸ್ವರಯೋಗದಿಂದ ಉದ್ಧಾನೇಶ್ವರರಿಗೆ ಲಭ್ಯವಾಯಿತು. ಅವರನ್ನು ಸ್ಮರಿಸುವುದೇ ನಾಡಿನ ಸೌಭಾಗ್ಯ ಎಂದರು.

ಅಧ್ಯಕ್ಷತೆ ವಹಿಸಿದ್ದ ಮೈಸೂರು ಜೆ.ಎಸ್.ಎಸ್. ಮೆಡಿಕಲ್ ಕಾಲೇಜ್ ಡಾ. ಸ. ಜ. ನಾಗಲೋಟಮಠ ಅವರು ಮಾತನಾಡಿ ನನ್ನ ಜೀವನದಲ್ಲಿ ಸಿದ್ಧಗಂಗೆ ಸಂಕ್ರಾಂತಿ ತಂದಿದೆ. ಬೇರೊಂದು ಜಗತ್ತಿನ ಮಕ್ಕಳಿರುವ ವಿಸ್ತಾರ ನೋಡಿ ವಿಸ್ಮಯ ನಾದೆ. ಇಲ್ಲಿಯ ವಜ್ರಮಹೋತ್ಸವ ಕಟ್ಟಡಗಳು ಪುರಾತ ಕಾಲದ ಸಂಸ್ಕೃತಿ ಪ್ರತಿಬಿಂಬಿಸುತ್ತವೆ. ವಿದ್ಯಾರ್ಥಿನಿಲಯ ಮಾತ್ರವಲ್ಲ. ವಿದ್ಯಾರ್ಥಿಗಳ ಗುಡಿ. ವಿದ್ಯಾರ್ಥಿಗಳನ್ನು ದೇವರಂತೆ ಶ್ರೀ ಶ್ರೀಗಳು ನೋಡುತ್ತಿದ್ದಾರೆ. ಸಹಸ್ರ ಸಹಸ್ರ ವಿದ್ಯಾರ್ಥಿಗಳು ಆನಂದವಾಗಿ ಇಲ್ಲಿ ಬದುಕುತ್ತಿದ್ದಾರೆ. ಇಂಥ ನೋಟ ಈ ಭೂಮಿಯ ಮೇಲೆ ಎಲ್ಲೂ ಕಾಣುವುದಿಲ್ಲ.

ದೇಹ ದೇವರಿಂದ ಬಂದ ಪ್ರಸಾದಕಾಯ. ಇದನ್ನು ಹಾಳುಮಾಡದೆ ಸರ್ವತೋಮುಖವಾಗಿ ಬೆಳೆಸಬೇಕು. ಈದಿಶೆಯಲ್ಲಿ ವಚನ ಸಾಹಿತ್ಯ ಪೋಷಕವಾಗುತ್ತದೆ. ವಚನ ಸಾಹಿತ್ಯ ನಿತ್ಯ ನೂತನ ವಿಜ್ಞಾನವಾಗಿದೆ. ಶರಣರು ವೈದ್ಯ ವಿಜ್ಞಾನಿಗಳಾಗಿದ್ದರು ಎಂದು ಹೇಳಿದರು.

### ಶ್ರೀ ಶ್ರೀಗಳವರಿಂದ ಆಶೀರ್ವಚನ :

ಪ್ರಪಂಚ ವೈಜ್ಞಾನಿಕ ಸಂಶೋಧನೆಗಳಿಂದ ಸಂಕೋಚವಾಗಿ ಎಲ್ಲರೂ ಸಂಘಟಿತರಾಗಿ ಅಂತರರಾಷ್ಟ್ರೀಯ ಬಾಂಧವ್ಯದಿಂದ ಬಾಳಬೇಕೆಂದು ಹೇಳುತ್ತದೆ. ಆದರೆ ವಿಶ್ವದಲ್ಲಿ ಎಲ್ಲಿಯೂ ಶಾಂತಿ, ಸಮಾಧಾನ, ನೆಮ್ಮದಿಇಲ್ಲ. ಮಾನವ ಜೀವನ ಸಾರ್ಥಕವಾಗದೆ ಜರ್ಝರಿತವಾಗಿದೆ.

ನಮ್ಮ ಗುರು ಶ್ರೀ ಶ್ರೀ ಉದ್ದಾನಶಿವಯೋಗಿಗಳು ಈ ಮಠದ ಮೂಲಭೂತ ಬೆಳವಣಿಗೆಗೆ ಆಧಾರವಾಗಿದ್ದರು. ಶರಣರ ಅನುಭವ ಮಹತ್ತರವಾದುದು. ಮನಸ್ಸು ಸಂಪೂರ್ಣ ಸ್ವಾಧೀನವಾದ ಮೇಲೆ ಅಗಾಧವಾದ ಫಲ ದೊರೆಯುತ್ತದೆ. ಯೋಗ ಜ್ಞಾನ ಬಲ್ಲವರು. ಹೊರಗಿನ ಬಾಹ್ಯ ಸೌಂದರ್ಯಕ್ಕೆ ಮರುಳಾದವರಲ್ಲ. ವಿದ್ಯಾವಂತರಲ್ಲ. ಆದರೆ ಅವರ ದಿವ್ಯಜ್ಞಾನ ಅಪಾರ. ಜ್ಞಾನ ಪ್ರಸಾರಕ್ಕಾಗಿ 1915ರಲ್ಲಿ ಸಂಸ್ಥೆ ಸ್ಥಾಪನೆ ಮಾಡಿದರು. ಜ್ಞಾನ ಸಂಪತ್ತು ಸೀಮಿತವಾಗದಂತೆ ಸರ್ವರಿಗೂ ವಿದ್ಯೆ ಕಲಿಯಲು ಅವಕಾಶ ದೊರಕಿಸಿದರು. 1917ರಲ್ಲಿ ಸಂಸ್ಕೃತ ಭಾಷೆಯನ್ನು ಸಾರ್ವತ್ರಿಕ ಗೊಳಿಸಿದರು. ಜಡತ್ವ ಸೋಮಾರಿತನ ಖಂಡಿಸುತ್ತಿದ್ದರು. ಎಲ್ಲವನ್ನು ಸ್ವಂತ ಆಚರಿಸಿ ಪರಿವರ್ತನೆ ಮಾಡುತ್ತಿದ್ದರು.



### ಗುರುಗಳ ಜೀವನಾದರ್ಶ ಅನುಕರಣೀಯ.

ಸ್ವಾರ್ಥ, ಶೋಷಣೆ ದೂರವಾಗಿ ಸಮಾಜ ಒಳ್ಳೆಯದನ್ನು ಕಾಣಲು ಸ್ವಾಮಿಗಳು ಜವಾಬ್ದಾರಿಯಿಂದ ಶ್ರಮಿಸಬೇಕು. ಪೀಠಕ್ಕೆ ಅಗೌರವತರಬಾರದು. ಲಾಂಛನಕ್ಕೆ ತಕ್ಕ ಆಚರಣೆಬೇಕು. ಅವರ ಶಿಕ್ಷೆ ನನ್ನನ್ನು ಈ ಮಟ್ಟಕ್ಕೆ ತಂದಿದೆ. ಈ ಮಠ ಉಳಿದು ಬೆಳೆಯುತ್ತಿದ್ದರೆ ನಿರಂಜನ ಜಗದ್ಗುರು ಗೋಸಲ ಸಿದ್ದೇಶ್ವರರು ಮತ್ತು ನಮ್ಮ ಗುರುಗಳ ಅನುಗ್ರಹ ಆಶೀರ್ವಾದದಿಂದ.

ನಾನು ಹೊಸದಾಗಿ ಏನೂ ಮಾಡಿಲ್ಲ. ದಾಸೋಹ, ಜಾತ್ರೆ, ಹಾಸ್ಟಲ್ ಎಲ್ಲವನ್ನು ಪ್ರಾರಂಭ ಮಾಡಿದ್ದರು. ಇವೆಲ್ಲವೂ ಬೆಳೆದು ಶಕ್ತಿ ಕೊಟ್ಟಿವೆ. ಎಂಥ ಕಷ್ಟ ಕಾಲದಲ್ಲೂ ಯಾರನ್ನೂ ಯಾಚಿಸಿಲ್ಲ. ಸ್ವಯಂ ಪ್ರೇರಿತರಾಗಿ ಜನತೆ ನೀಡುತ್ತಾ ಬಂದಿದ್ದಾರೆ. ಚಿಕ್ಕಮಕ್ಕಳಿಗೆ ಶಿಕ್ಷಣ ನೀಡುವುದು ಮನಸ್ಸಿಗೆ ಮಹಾದಾನ ಉಂಟು ಮಾಡಿದೆ. ಎಲ್ಲಾ ಕಾಲಕ್ಕೂ ನಾಡಿನ ಜನತೆ ಶ್ರೀ ಮಠದ ಮೇಲೆ ಸದ್ಭಾವನೆ ಹೊಂದಿ ಅದರ ಬೆಳವಣಿಗೆಗೆ ಯಶಸ್ಸು ಕೋರಬೇಕೆಂದು ಕರೆ ಇತ್ತರು.

ಸ್ವಾಗತ ಕೋರಿ ಕಾರ್ಯಕ್ರಮವನ್ನು ಶ್ರೀ ಹೆಚ್. ವಿ. ವೀರಭದ್ರಯ್ಯ ನಿರೂಪಿಸಿದರು.

### ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ

ಎರಡನೆ ಅಧಿವೇಶನದಲ್ಲಿ ಬೆಂಗಳೂರು ವಿಶ್ವ ವಿದ್ಯಾಲಯ ಕನ್ನಡ ಪ್ರಾಧ್ಯಾಪಕರಾದ ಶ್ರೀ ಕಿ. ರಂ. ನಾಗರಾಜ್ ಉಪನ್ಯಾಸ ನೀಡಿದರು. ಜನ ಸಾಮಾನ್ಯರ ಮೇಲೆ ಬಸವಣ್ಣನವರ ವಚನಗಳು ಹೆಚ್ಚು ಪ್ರಭಾವ ಬೀರಿವೆ. ಬಿಜ್ಜಳನ ಅರಮನೆ ಮುಂದೆ ಬಸವಣ್ಣನವರ ಕ್ರಿಯಾಶೀಲ ಮನೆ ಇತ್ತು. ಕೇವಲ ಆಧ್ಯಾತ್ಮಿಕ ವ್ಯಕ್ತಿಯಾಗಿರಲಿಲ್ಲ. ಜೀವನದ ಎಲ್ಲಾ ಬದಲಾವಣೆಗೆ ಬಹಳ ಶ್ರಮಿಸಿದರು. ರಾಜಕೀಯದಿಂದ ಆಧ್ಯಾತ್ಮಿಕತೆಗೆ ಒತ್ತು ನೀಡಿದರು. ಲೋಕದ ವಸ್ತುಗಳನ್ನು ಆಧ್ಯಾತ್ಮಿಕ ಒರೆಗಲ್ಲಿಗೆ ಹಚ್ಚಿದರು. ಭಕ್ತಿ ನೈತಿಕ ವಿಚಾರಕಷ್ಟ. ಈ ಬಗ್ಗೆ ಉಗ್ರವಾಗಿ ತಮ್ಮನ್ನು ವಿಮರ್ಶಿಸಿ ಕೊಳ್ಳುತ್ತಾರೆ. ದೇಹದ ಕೊಳೆ ತೆಗೆಯುವುದು ಸುಲಭ ಮನಸ್ಸಿನ ಕೊಳೆ ತೆಗೆಯುವುದುಕಷ್ಟ. ಧರ್ಮ ನೀತಿ ಪೂರಕವಾಗಿರಬೇಕು. ಮಾನವ ದೇಹವೇ ದೇವಾಲಯ ಎಂಬ ಸಿದ್ಧಾಂತ ರೂಪಿಸಿದರು. ಇದರ ಪರಿಣಾಮವಾಗಿ ಹೊಸ ಸಮಾಜ ನಿರ್ಮಾಣವಾಯಿತು. ಅವರ ವಚನಗಳೇ ದೇವವಾಣಿ. ಅವು ಎಲ್ಲಾ ಕಾಲಕ್ಕೂ ಪ್ರಸ್ತುತ ಎಂದರು.

ಗುಲ್ಬರ್ಗ ಜಿಲ್ಲೆ, ಶಹಾಪುರ ತಾ|| ಡಾ. ಗಂಗಮ್ಮ ಸತ್ಯಂಪೇಟೆ ಮಾತನಾಡಿ ಬಸವಣ್ಣನವರು ಸಮಾಜದ ಸಮಗ್ರ ಕ್ರಾಂತಿ ಮಾಡಿದರು. ಇವರ ಕ್ರಾಂತಿಯಲ್ಲಿ ಸ್ತ್ರೀಯರು ಭಾಗವಹಿಸಿದ್ದು ವಿಶೇಷ. ಅಕ್ಕನಾಗಮ್ಮ ಬಸವಣ್ಣನಿಗೆ ಪ್ರೇರಕ ಶಕ್ತಿಯಾದಳು. ತಾಯಿಯಾಗಿ ಸಲಹಿ ಆರೈಕೆ ಮಾಡಿದಳು.

ಶರಣೆಯರು ಉಜ್ವಲ ನಕ್ಷತ್ರದಂತೆ. ಉದಾ: ಅಕ್ಕಮಹಾದೇವಿ. ರಾಜ ವೈಭವ ತ್ಯಜಿಸಿ ರಾಜನ ಅಜ್ಞಾನ ವಿರುದ್ಧ ಸಿಡಿದೆದ್ದಳು. ಕೆಚ್ಚೆದೆಯ ಧೈರ್ಯದಿಂದ ಸಮಸ್ಯೆಗಳನ್ನು ಸಹಜ ರೀತಿಯಲ್ಲಿ ನೋಡಿದಳು. ಕಲ್ಯಾಣದಲ್ಲಿ ಪ್ರಭುವಿನ ಪರೀಕ್ಷೆಯಲ್ಲಿ ಗೆದ್ದು ನಿಮ್ಮ ಮಂಡೆಗೆ ಹೂವು ತರುವೆನಲ್ಲದೆ ಹುಲ್ಲು ತಾರೆನೆಂದು ಹೇಳಿ ಶ್ರೀ ಶೈಲದಲ್ಲಿ ಲೀನವಾಗುತ್ತಾಳೆ. ಶರಣರು ಕೊಟ್ಟ ಸ್ತ್ರೀ ಸ್ವಾತಂತ್ರ್ಯ ದುರುಪಯೋಗವಾಗಲಿಲ್ಲ. ಆಚಾರ-ವಿಚಾರಕ್ಕಾಗಿ ಸ್ವಾತಂತ್ರ್ಯ. ಆದರೆ ಇಂದು ಸ್ತ್ರೀ-ಸ್ವಾತಂತ್ರ್ಯಕ್ಕೆ ದುರಂತವಾಗಿದೆ. ಸ್ವೇಚ್ಛಾ ಪ್ರವೃತ್ತಿ ಜಾಸ್ತಿಯಾಗಿ ಸೌಂದರ್ಯ ಸ್ಪರ್ಧೆಗಳು ಹೀನ ಕೂಪಕ್ಕೆ ತಳ್ಳಿ ಯುವ ಜನಾಂಗವನ್ನು ಕೆಟ್ಟ ಚಾಳಿಗಳ ಕಡೆ ಕೈ ಬೀಸಿ ಕರೆಯುತ್ತಿವೆ ಎಂದು ಭಾವುಕತೆಯಿಂದ ಹೇಳಿದರು.

ಅಧ್ಯಕ್ಷ ಸ್ಥಾನದಿಂದ ಬೆಂ.ವಿ. ಕನ್ನಡ ಅಧ್ಯಯನ ಕೇಂದ್ರ ನಿರ್ದೇಶಕರು ಮತ್ತು ನಾಟಕ ಅಕಾಡೆಮಿ ಅಧ್ಯಕ್ಷರಾದ ಡಾ. ಕೆ- ಮರುಳಸಿದ್ದಪ್ಪ ಮಾತನಾಡುತ್ತ ನಾಟಕ ನೀತಿ ಪ್ರತಿಪಾದನೆ ನಿರೂಪಿಸುವುದರಿಂದ ಸಮಾಜ ತಿದ್ದಲು ಪ್ರಬಲ ಮಾಧ್ಯಮ. ಜನಗಳನ್ನು ಚುಚ್ಚಿ ಎಚ್ಚರಿಸಲು ವೈಚಾರಿಕ ಸಂದೇಶ ಮುಖ್ಯ. ಈ ಕಾರ್ಯವನ್ನು ದಕ್ಷತೆಯಿಂದ ಬಸವಜಯಂತಿ ಆಚರಣೆಯನ್ನು ನಾಟಕದ ಮೂಲಕ 1979 ವರ್ಷದಿಂದ ನಡೆಸಿಕೊಂಡು ಬರುತ್ತಿರುವುದು ಶ್ಲಾಘನೀಯ. ಕರ್ನಾಟಕ ನಾಟಕ ಅಕಾಡೆಮಿಇದಕ್ಕೆ ನೆರವು ನೀಡಲು ಪರಿಶೀಲಿಸುವುದಾಗಿ ಭರವಸೆ ಇತ್ತರು.

ದೇವರು ಧರ್ಮವನ್ನು ವಚನಕಾರರು ಜನ ಸಾಮಾನ್ಯರಿಗೆ ಮುಟ್ಟಿಸಿದ್ದಾರೆ. ಧರ್ಮ-ರಾಜಕೀಯದಲ್ಲಿ ಸಂಘರ್ಷ ನಡೆದು ಬಸವಣ್ಣ, ಗಾಂಧೀಜಿ ಪರಾಜಿತರಾಗಿದ್ದಾರೆ. ಅವರ ಮಟ್ಟಕ್ಕೆ ಜಗತ್ತನ್ನು ಓಡಿಸುವುದು ಕಷ್ಟ. ತೀವ್ರವಾದ ಆದರ್ಶಗಳು ಅಪಾಯ. ಆದಾಗ್ಯೂ ಮಹಾನ್ ವ್ಯಕ್ತಿಗಳು ಅಂಜದೆ ಅಳುಕದೆ ತಮ್ಮ ಸಿದ್ಧಾಂತವನ್ನು ಸಾಧಿಸಿ ಅಮರರಾಗಿದ್ದಾರೆ.

ಉತ್ತಮ ಕೆಲಸ ಕಾರ್ಯಗಳನ್ನು ನೋಡಿ ಮೆಚ್ಚಿ ಆನಂದಪಡುವ ಚಲನಶೀಲ ಸಮಾಜ ನಿರ್ಮಾಣವಾಗಬೇಕು. ಪೂಜ್ಯ ಶ್ರೀ ಶ್ರೀಗಳು ಸದ್ದುಗದ್ದಲವಿಲ್ಲದೆ ಮಹಾ ಸಾಧನೆ ಮಾಡಿ ಶ್ರೀ ಮಠ ಬೆಳೆಸಿದ್ದಾರೆ. ಇದರ ಬಗ್ಗೆ ದ್ವೇಷಾಸೂಯೆ ಹೊಂದಿ ಕೇಡು ಬಯಸುವ ಪ್ರಯತ್ನ ಸಲ್ಲದು ಎಂದು ನೊಂದು ಹೇಳಿದರು.

**ಶ್ರೀ ಶ್ರೀಗಳವರ ಸಂದೇಶ :** ಇಂದು ಮಾನವರು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿದ್ದಾರೆ. ಬಾಳು ಭವ್ಯವಾಗಬೇಕು. ನನಗೆ ಕ.ವಿ.ವಿ ಡಾಕ್ಟರೇಟ್ ಕೊಟ್ಟಾಗ 1966 ರಲ್ಲಿ ಸುಪ್ರೀಂ ಕೋರ್ಟು ಮುಖ್ಯ ನ್ಯಾಯಾಧೀಶರಾದ ಶ್ರೀ ಗಜೇಂದ್ರಗಡ್ಕರ್ ಹೇಳಿದ ವಾಕ್ಯ "If we want to solve the problems of



modern India and the whole world we must go back to Karnataka Basaveswara period. ಬಸವಣ್ಣನವರು ವಿಶ್ವಮಾನವರಾಗಿದ್ದರು. ಅವರು ಅರಿವಿನ ಮಹಾಬೆಳಗು. ಮಾನವನ ಜೀವನ ಮಹಾವರ Human life is great a gift. ಅಲ್ಪೀಕರಿಸಬಾರದು. ಪ್ರಪಂಚ ಸತ್ಯ ಮಾಯೆಯಲ್ಲ. ಕರ್ತಾರನ ಕಮ್ಮಟ. ಇಲ್ಲಿ ಮಾನವರು ಉತ್ತಮ ನಾಣ್ಯಗಳಾಗಬೇಕು.

ಸಮಾಜ ಸರಿಪಡಿಸಬಹುದು. ಆಳ್ವಿಕೆ ಮಾಡುವ ನಾಯಕರು, ಅಧಿಕಾರಿಗಳು ಪ್ರಾಮಾಣಿಕತೆಯಲ್ಲಿ ಶುದ್ಧರಾಗಬೇಕು. Purification always comes from top. ಪ್ರಜಾಪ್ರಭುತ್ವದ ಯಶಸ್ಸು ನಾಯಕರನ್ನು ಅವಲಂಬಸಿದೆ. ಜನ ಸಾಮಾನ್ಯರು ಅರಿವಾಗುವಂತೆ ಮಾಡಬೇಕು. ಎಲ್ಲರೂ ಚೆನ್ನಾಗಿ ಬಾಳಿ ಬದುಕುವಂತೆ ಮಾಡಬೇಕು. ದುಡಿಮೆಯೇ ದೇವರು. ಸ್ವಾವಲಂಬನೆ ಜೀವನ ಶ್ರೇಷ್ಠ. ಬೆವರುಸುರಿಸಿ ಊಟ ಮಾಡಬೇಕು. ಈ ನಿಟ್ಟಿನಲ್ಲಿ ಬಸವಣ್ಣ ಕ್ರಾಂತಿಯ ಮೂಲ ಪುರುಷ. ನಾಟಕ ಜನ ಜಾಗೃತಿ ಉಂಟುಮಾಡುತ್ತಿದೆ. ಈ ಕಾರ್ಯದಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಸ್ಪಂದಿಸುತ್ತಿದ್ದಾರೆ. ಇದು ಸಂತೋಷ ತಂದಿದೆ.

ಪ್ರಾರಂಭದಲ್ಲಿ ಮೈಸೂರು ಜಿಲ್ಲೆ ಬೆಟ್ಟದಪುರ ಪೂಜ್ಯ ಶ್ರೀ ಚನ್ನಬಸವ ದೇಶೀ ಕೇಂದ್ರ ಸ್ವಾಮಿಗಳು ಹಾಸನ ಜಿಲ್ಲೆ ಮಾಯಗೊಂಡನಹಳ್ಳಿ ಪೂಜ್ಯ ಶ್ರೀ ಚಂದ್ರಶೇಖರ ಸಾಮಿಗಳು ತಮ್ಮ ಪ್ರದೇಶದಲ್ಲಿ ನಾಟಕವನ್ನು ಪ್ರದರ್ಶಿಸಲು ವಿಶೇಶ ನೆರವು ಮತ್ತು ಸಹಕಾರ ನೀಡಿದುದನ್ನು ಸ್ಮರಿಸಿ ಸನ್ಮಾನಿಸಲಾಯಿತು.

ಶ್ರೀ ಬಿ. ವೀರಭದ್ರಯ್ಯ ಸ್ವಾಗತ ಕೋರಿದರು. ಶ್ರೀ ಕೆ. ಬಸವರಾಜು ವಂದನೆ ಸಲ್ಲಿಸಿದರು. ಶ್ರೀ ಹೆಚ್.ವಿ. ವೀರಭದ್ರಯ್ಯ ನಿರೂಪಣೆ ಮಾಡಿದರು.

## ಸಂಯುಕ್ತ ವಿದ್ಯಾರ್ಥಿಸಂಘದ ವಾರ್ಷಿಕೋತ್ಸವ

25 ಜನವರಿ 1994 ಶ್ರೀ ಮಠದ ಸನಿವಾಸ ವಿದ್ಯಾಸಂಸ್ಥೆಗಳ ವಾರ್ಷಿಕೋತ್ಸವ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲಿ ನೆರವೇರಿತು. ಶ್ರೀ ಶ್ರೀಗಳ ಸಾನಿಧ್ಯದಲ್ಲಿ ಪ್ರಾಥಮಿಕ ಪ್ರೌಢಶಿಕ್ಷಣ ಸಚಿವರಾದ ಶ್ರೀ ಹೆಚ್.ಜಿ. ಗೋವಿಂದೇಗೌಡರು ಅಧ್ಯಕ್ಷತೆ ವಹಿಸಿದ್ದರು. ಅವರು ಮಾತನಾಡಿ ಇಲ್ಲಿ ವಿದ್ಯಾರ್ಥಿಗಳ ಸಾಗರವನ್ನು ನೋಡಿ ಮನಸ್ಸಿಗೆ ಆನಂದವಾಗಿದೆ. ವಂಚಿತರಾದ ಮಕ್ಕಳನ್ನು ಸರಿಯಾದ ಪ್ರಜೆಗಳನ್ನಾಗಿ ಪರಿವರ್ತಿಸುವ ಕಾರ್ಯ ಶ್ರೀ ಸಿದ್ಧಗಂಗೆಯಲ್ಲಿ ನಡೆಯುತ್ತಿದೆ. ಜಾತಿ ವರ್ಗಗಳ ಭೇದವಿಲ್ಲದೆ ಸಮಾನತೆಯ ಆಧಾರದ ಮೇಲೆ ಮುನ್ನಡೆಯುತ್ತಿರುವುದು ಸಂತೋಷವಾಗಿದೆ. ಇಂಥಹ ಉಚಿತ ಅಪೂರ್ವಸವಲತ್ತು ಸೌಲಭ್ಯಹೊಂದಿರುವ ವಿದ್ಯಾರ್ಥಿಗಳು ಗೌರವಾನ್ವಿತ

ಆದರ್ಶ ವ್ಯಕ್ತಿಗಳಾಗಿ ಜೀವನ ನಡೆಸಬೇಕು. ಇಂತಹ ಮಠದಿಂದ ಸರ್ಕಾರದ ಜವಾಬ್ದಾರಿ ಕಡಿಮೆಯಾಗಿದೆ. ಶಿಕ್ಷಣ ಮಹಾಶಕ್ತಿ ನೀಡುತ್ತದೆ. ಇದನ್ನರಿತು ತಂದೆ ತಾಯಂದಿರು ಜಾಗೃತರಾಗಬೇಕು. ಉತ್ತಮವಾದ ಪವಿತ್ರವಾದ ಕೆಲಸಗಳಿಗೆ ದಾನ ಮಾಡಬೇಕು. ಶ್ರೀ ಮಠಕ್ಕೆ ನೀಡುವ ದಾನ ಸರಿಯಾದ ರೀತಿಯಲ್ಲಿ ವಿನಿಯೋಗವಾಗುತ್ತಿದೆ ಇದಕ್ಕೆ ಶ್ರೀ ಶ್ರೀಗಳವರ ಹೆಸರಿನಲ್ಲಿ ನಿರ್ಮಾಣವಾಗಿರುವ ಭವ್ಯ ದಿವ್ಯ ಸ್ಮಾರಕಗಳೇ ಪ್ರತ್ಯಕ್ಷ ಸಾಕ್ಷಿ. ಇವು ಶ್ರೀ ಶ್ರೀಗಳ ಮಹಾನ್ ಕಾರ್ಯಕ್ಷೇತ್ರವನ್ನು ವಿವರಿಸುತ್ತವೆ. ಇಲ್ಲಿಯ ದಾಸೋಹ ಮಹಾ ದಾಸೋಹ. ಎಲ್ಲಿಯೂ ಕಾಣಲಾಗುವುದಿಲ್ಲ.

ಶಿಕ್ಷಕರು ಜವಾಬ್ದಾರಿಯಿಂದ ಕೆಲಸ ಮಾಡಬೇಕು. ಇಲ್ಲವಾದರೆ ಭಾವಿಜನಾಂಗ ಹಾಳಾಗುತ್ತದೆ. ಪರಿಪೂರ್ಣವಾಗಿ ಸಮರ್ಪಣಾಭಾವನೆಯಿಂದ ಕರ್ತವ್ಯವನ್ನು ನಿರ್ವಹಿಸಬೇಕೆಂದು ಕರೆ ಇತ್ತರು.

ಮುಖ್ಯ ಅತಿಥಿಗಳಾಗಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಬೆಂ.ವಿ.ವಿ ಮಾಜಿ ಉಪಕುಲಪತಿಗಳಾದ ಡಾ. ಹೆಚ್. ನರಸಿಂಹಯ್ಯನವರು ಶ್ರೀ ಮಠದ ಬೆಳವಣಿಗೆ ನೋಡಿ ನಭೂತೋ ನಭವಿಷ್ಯತಿ ಎಂದರು. ಶ್ರೀ ಶ್ರೀಗಳು ಸಾಧಿಸಿರುವ ಕಾರ್ಯಕ್ಷೇತ್ರವನ್ನು ಕಂಡು ಶ್ಲಾಘಿಸಿದರು. ಹಿಂದೆಯಾರೂ ಮಾಡಿಲ್ಲ. ಮುಂದೆ ಯಾರು ಮಾಡುವುದು ಅಸಾಧ್ಯವೆಂದು ಬಣ್ಣಿಸಿದರು. ಒಬ್ಬವ್ಯಕ್ತಿ ಹೇಗೆ ಇಂಥಹ ವಿಸ್ತಾರವಾದ ಮಹಾ ಕಾರ್ಯಗಳನ್ನು ಹೇಗೆನಿರ್ವಹಿಸುತ್ತಾರೊ? ಒಂದೊಂದೂ ಸಂಶೋಧನೆಗೆ ಒಳಪಡುವಂತಾಗಿದೆ. ಯಶಸ್ಸುಗಳಿಸಲು Short cut ಇಲ್ಲ. ಸ್ವಾಮಿಗಳು ಅಪಾರ ಕಷ್ಟಪಟ್ಟಿದ್ದಾರೆ. ಕರ್ನಾಟಕದಾದ್ಯಂತ ಹಳ್ಳಿನಗರಗಳಲ್ಲಿ ಭಿಕ್ಷೆ ಮಾಡಿ ನಿಮ್ಮನ್ನು ಸಾಕುತ್ತಿದ್ದಾರೆ.

ವಿದ್ಯಾರ್ಥಿಗಳನ್ನು ಕುರಿತು ಶಿಕ್ಷಣದಲ್ಲಿ ಎರಡು ವಿಧ.

1 ಜೀವನಕ್ಕಾಗಿ ಶಿಕ್ಷಣ 2 ಜೀವನವೇ ಶಿಕ್ಷಣ. ಇದರ ಅರ್ಥತಿಳಿದು ಒಳ್ಳೆಯ ಮೌಲ್ಯಗಳನ್ನು ಬೆಳೆಸಿಕೊಳ್ಳಬೇಕು.

ಆರ್ಥಿಕ ಸಮಸ್ಯೆಗಳನ್ನು ಪರಿಹಾರ ಮಾಡಬಹುದು. ಸಾಮಾಜಿಕ ಸಮಸ್ಯೆಗಳನ್ನು ಬಿಡಿಸುವುದು ಕಷ್ಟ. ಇದಕ್ಕೆ ಮಾನವೀಯ ಅನುಕಂಪ ಸೇವಾಭಾವನೆ ಮುಖ್ಯ. ಇಂದು ವಿಜ್ಞಾನ, ತಂತ್ರಜ್ಞಾನ ಬೆಳೆಯುತ್ತಿದೆ. ಸ್ವತಂತ್ರ ಆಲೋಚನೆ ಬೇಕು. ಪ್ರಶ್ನೆಮಾಡಿ ಒಪ್ಪಬೇಕು. ಉ.ದಾ ಗಣೇಶ ಹಾಲು ಕುಡಿಯುತ್ತಾನೆ. ನಂಬಿದರೆ ಹೇಗೆ. ಸ್ವತಂತ್ರವಾಗಿ ಯೋಚಿಸಿ ವೈಚಾರಿಕ ಭಾವನೆ ಬೆಳೆಸಿಕೊಳ್ಳ. ವಿದ್ಯಾವಂತರು ಬೇಕು. ಆತ್ಮ ವಿಶ್ವಾಸದಿಂದ ಕಷ್ಟಪಟ್ಟು ಹಿಡಿದ ಕೆಲಸ ಸಾಧಿಸಬೇಕೆಂಬ ಛಲಬೇಕು T. V. ಯಿಂದ ವಿದ್ಯಾರ್ಥಿಗಳು ಹಾಳಾಗುತ್ತಿದ್ದಾರೆ. ವಿವೇಚನೆಯಿಂದ ಬಳಸಬೇಕು. ಎಲ್ಲಾ ಕಾಲವನ್ನು ಓದಲಿಕ್ಕೆ ಉಪಯೋಗಿಸಬೇಕೆಂದು ವಿದ್ಯಾರ್ಥಿಗಳನ್ನು ಎಚ್ಚರಿಸಿದರು.



ತುಮಕೂರು ಮಾಜಿ ಸಚಿವರಾದ ಶ್ರೀ ಲಕ್ಷ್ಮಿನರಸಿಂಹಯ್ಯನವರು ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನ ವಿತರಣೆ ಮಾಡಿದರು.

**ಶ್ರೀ ಶ್ರೀಗಳವರ ಆಶೀರ್ವಚನ:** ಇಂದು ಮಹತ್ವದ ದಿನ. ಡಾ. ಹೆಚ್. ನರಸಿಂಹಯ್ಯನವರನ್ನು ನೋಡಿ ಅವರ ಮಾತನ್ನು ಕೇಳಿದ್ದೀರಿ. ವಿದ್ಯಾರ್ಥಿಗಳು ಹೆಮ್ಮೆ ಪಡಬೇಕು, ಸಂತೋಷವಾಗುತ್ತದೆ. ಆಳವಾದ ಶಿಕ್ಷಣದ ಅನುಭವವುಳ್ಳ ಸರಳ ಜೀವನದ ಪ್ರತೀಕವಾಗಿದ್ದಾರೆ. ಅವರು ಸನ್ಯಾಸಿಗಳು. ಕಾವಿ ಬಟ್ಟೆ ಹಾಕಿಲ್ಲ ಅಷ್ಟೆ. ಸಭ್ಯ ನಡವಳಿಕೆಯ ವ್ಯಕ್ತಿ. ನಿರ್ಭೀತರು, ಯಾರಿಗೂ ಭಯ ಪಡುವವರಲ್ಲ.

ಶ್ರೀ ಗೋವಿಂದೇಗೌಡರು ಗಾಂಧಿವಾದಿಗಳಾಗಿದ್ದಾರೆ. ಒಳ್ಳೆ ಖಾತೆ ಸಿಕ್ಕಿದೆ. ಹೆಚ್ಚು ಜವಾಬ್ದಾರಿಯಿಂದ ನಿರ್ವಹಿಸುತ್ತಿದ್ದಾರೆ. ಹಳ್ಳಿಗಾಡಿನ ಶಿಕ್ಷಣದ ಬಗ್ಗೆ ಪ್ರಸ್ತಾಪಿಸಿದ್ದಾರೆ. ವಿದ್ಯಾರ್ಥಿಗಳು ಕಷ್ಟಪಟ್ಟು ವ್ಯಾಸಂಗ ಮಾಡುತ್ತಿಲ್ಲ, ಶ್ರಮವಿಲ್ಲದ ಆರಾಮ ಜೀವನ ಅಪೇಕ್ಷೆ ಹೆಚ್ಚಾಗಿದೆ. ಇಂದಿನ ಸ್ಪರ್ಧಾ ಸಮಾಜ ಜೀವನದಲ್ಲಿ ಉತ್ತಮ ಭವಿಷ್ಯವನ್ನು ಕಾಣಬೇಕಾದರೆ ಅಧ್ಯಯನಶೀಲರಾಗಬೇಕು. ಅವರು ಹೇಳಿದ ಮಾತುಗಳನ್ನು ಚಿಂತನೆ ಮಾಡಿ ಅನುಕರಣೆ ಮಾಡಬೇಕೆಂದು ಹೇಳಿದರು.

ಪ್ರಾರಂಭಕ್ಕೆ ಹೆಚ್. ಬಿ. ಗಂಗಾಧರಯ್ಯ ಸ್ವಾಗತ ಕೋರಿದರು, ಸಂಘದ ವರದಿಯನ್ನು ಡಿ. ಎಸ್. ನಾಗರಾಜ್ ಓದಿದರು. ಜಿ. ಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಗವಿಸಿದ್ದಯ್ಯ ವಂದನೆ ಸಲ್ಲಿಸಿದರು.

## ಗಣರಾಜ್ಯೋತ್ಸವ

26 ಜನವರಿ 1996 ಶುಕ್ರವಾರ ಸಂ.ವಿ.ಸಂ ಆಶ್ರಯದಲ್ಲಿ 47 ನೇ ಗಣರಾಜ್ಯೋತ್ಸವವನ್ನು ಆಚರಿಸಲಾಯಿತು. ತ್ರಿವಿಧ ದಾಸೋಹ ಮೂರ್ತಿಗಳಾದ ಶ್ರೀ ಶ್ರೀಗಳವರ ಸಾನಿಧ್ಯದಲ್ಲಿ ತುಮಕೂರು ಜಿಲ್ಲಾಧಿಕಾರಿಗಳಾದ ಶ್ರೀ ಕೆ.ಎಸ್. ಮಂಜುನಾಥ್ ಧ್ವಜಾರೋಹಣ ಮಾಡಿ ವಿದ್ಯಾರ್ಥಿಗಳ ಪಥ ಸಂಚಲನೆಯಲ್ಲಿ ವಂದನೆ ಸ್ವೀಕರಿಸಿದರು.

ವಿದ್ಯಾರ್ಥಿಗಳಿಂದ ವಿವಿಧ ಕವಾಯತ್ ಪ್ರದರ್ಶನ ನಡೆಯಿತು. ವಿಶೇಷ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಡಿ.ಎಸ್. ನಾಗರಾಜು ನಿರೂಪಣೆಯೊಂದಿಗೆ ಎಲ್ಲಾ ಸನಿವಾಸ ವಿದ್ಯಾಸಂಸ್ಥೆಗಳ ವಿದ್ಯಾರ್ಥಿಗಳು ನಡೆಸಿಕೊಟ್ಟರು.

ಜಿ. ಗುರುಸಿದ್ದಪ್ಪ ಸ್ವಾಗತಕೋರಿದರು. ಜಿ.ಕೆ. ಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು. ಬಿ. ರೇವಣಸಿದ್ದಯ್ಯ ವಂದನೆ ಸಲ್ಲಿಸಿದರು.

## -:ಕೃಷಿ-ಕೈಗಾರಿಕಾ ವಸ್ತುಪ್ರದರ್ಶನ ಉದ್ಘಾಟನೆ :-

ಶ್ರೀಮಠದಲ್ಲಿ ಶ್ರೀಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರಾಮಹೋತ್ಸವದ ಅಂಗವಾಗಿ
ರಾಜ್ಯಮಟ್ಟದ 32 ನೇ ಕೃಷಿ-ಕೈಗಾರಿಕಾ ವಸ್ತುಪ್ರದರ್ಶನದ ಉದ್ಘಾಟನೆಯನ್ನು
7-2-96 ಬುಧವಾರ ತುಮಕೂರು ಜಿಲ್ಲಾ ಪರಿಷತ್ ಅಧ್ಯಕ್ಷ ಜಿ. ಎಲ್. ನಾಗಣ್ಣ
ನೆರವೇರಿಸಿ ಮಾತನಾಡಿ ಜ್ಞಾನ ಸಂಪಾದನೆ ಮತ್ತು ವೈಜ್ಞಾನಿಕ ಪದ್ಧತಿಯನ್ನು
ನಿರಂತರವಾಗಿ ಎಲ್ಲಾ ವ್ಯಕ್ತಿಗಳಲ್ಲಿ ಅಳವಡಿಸಿಕೊಂಡು ಸುಧಾರಣೆ ಹೊಂದಬೇಕು.
ಇದಕ್ಕಾಗಿ ಶ್ರೀ ಶ್ರೀಗಳವರು ದೊರಕಿಸಿರುವ ವಸ್ತುಪ್ರದರ್ಶನ ವ್ಯವಸ್ಥೆಗೆ ಜಿಲ್ಲಾಪರಿ
ಷತ್ ಪರವಾಗಿ ಧನ್ಯವಾದಗಳನ್ನು ಸಮರ್ಪಿಸಿದರು.

ಮುಖ್ಯ ಅತಿಥಿಗಳಾಗಿ ಮಾಜಿ ಸಚಿವ ಲಕ್ಷ್ಮೀನರಸಿಂಹಯ್ಯ ಮಾತನಾಡಿ ಲಕ್ಷಾಂ
ತರ ಮಂದಿ ಭೇಟಿ ಕೊಡುವ ಈ ವಸ್ತುಪ್ರದರ್ಶನಕ್ಕೆ ಅಭಿವೃದ್ಧಿಪಡಿಸಲು ಸರ್ಕಾರ
ಶಾಶ್ವತ ಅನುದಾನ ನೀಡಬೇಕೆಂದು ಕೋರಿದರು. ತುಮಕೂರು ಶಾಸಕರಾದ
ಎಸ್. ಶಿವಣ್ಣನವರು ಸರ್ಕಾರ ಮಾಡುವ ಈ ವಸ್ತುಪ್ರದರ್ಶನ ವ್ಯವಸ್ಥೆಯನ್ನು ಶ್ರೀ
ಶ್ರೀಗಳು ಮಾಡುತ್ತಿರುವುದು ಶ್ಲಾಘನೀಯ. ಇದರ ಮಹತ್ವ ಅರಿತು ಸರ್ಕಾರ
ಶಾಶ್ವತ ಅನುದಾನ ನೀಡಬೇಕೆಂದರು.

ದೂರದರ್ಶನದ ಸುದ್ದಿಸಂಪಾದಕ ಜಿ. ಕೆ. ಶ್ರೀನಿವಾಸನ್ ಮಾತನಾಡಿ ಶ್ರೀಶ್ರೀ
ಗಳು ವೈಜ್ಞಾನಿಕ ತಳಹದಿಯ ಮೇಲೆ ಜನ ಶಿಕ್ಷಣಕ್ಕೆ ವಸ್ತುಪ್ರದರ್ಶನದ ಮೂಲಕ
ನೋಡಿಕೇಳಿ ತಿಳಿಯಬಹುದಾಗಿದೆ. ರೈತರು ನಿಗದಿತ ವೇಳೆಯಲ್ಲಿ ಜಾತ್ರೆಗೆ ಬರ
ಬೇಕು. ಅಗತ್ಯ ಸೌಕರ್ಯಗಳನ್ನು ಒದಗಿಸುವುದು ಕಷ್ಟವಾಗುತ್ತದೆ. ಜಾಹಿರಾತು
ಗಳ ಆಧಾರದ ಮೇಲೆ ವಸ್ತುಗಳನ್ನು ಕೊಳ್ಳಬಾರದು. ವಿವೇಚನೆಯಿಂದ ಕೊಳ್ಳ
ಬೇಕೆಂದು ಕರೆಯಿತ್ತರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕೃಷಿ ಸಚಿವ ಸಿ. ಬೈರೇಗೌಡರು ಮಾತ
ನಾಡಿ ಆಧುನಿಕ ಕೃಷಿ ಪದ್ಧತಿ ಅಳವಡಿಸಿಕೊಳ್ಳುವಂತೆ ರೈತರಿಗೆ ಕರೆಯಿತ್ತರು.
ಕೃಷಿ ಪ್ರಧಾನ ದೇಶವಾದ ಭಾರತದಲ್ಲಿ ಶೇ. 70 ರಷ್ಟು ಜನ ಬೇಸಾಯ ಅವಲಂಬಿ
ಸಿದ್ದರೂ ಅಗತ್ಯಕ್ಕೆ ಬೇಕಾದ ಆಹಾರ ಬೆಳೆಯಲು ಸಾಧ್ಯವಾಗಿಲ್ಲ. ಶೇ. 2 ರಿಂದ 3
ರಷ್ಟು ವ್ಯವಸಾಯ ಮಾಡುವ ಜನರಿರುವ ದೇಶಗಳು ಅಗತ್ಯಕ್ಕಿಂತ ಹೆಚ್ಚು ಆಹಾರ
ಪದಾರ್ಥಗಳನ್ನು ಬೆಳೆಯುವಲ್ಲಿ ಯಶಸ್ಸು ಕಂಡಿದ್ದಾರೆ. ಅನೇಕ ಪಂಚವಾರ್ಷಿಕ
ಯೋಜನೆಗಳು ಮುಗಿದಿದ್ದರೂ ಕೃಷಿ ಕ್ಷೇತ್ರಕ್ಕೆ ಯಾರೂಮಹತ್ವ ನೀಡಲಿಲ್ಲ. ಜೀವ
ನಕ್ಕೆ ಅಗತ್ಯವಾಗಿ ಬೇಕಾಗುವ ಎಣ್ಣೆ ಹಾಗೂ ಸಕ್ಕರೆ ಪದಾರ್ಥಗಳನ್ನು ಬೇರೆದೇಶ
ಗಳಿಂದ ತರಿಸಿಕೊಳ್ಳುವ ಪದ್ಧತಿ ಬಂದಿರುವುದು ವಿಷಾದನೀಯ. ರೈತರು ತಾವು
ಬೆಳೆಯುವ ಬೆಳೆಗೆ ಸರಿಯಾದ ಬೆಲೆ ಸಿಗದಿರುವುದು ಇದಕ್ಕೆ ಕಾರಣ. ಭಾರಿ ಕೈಗಾ
ರಿಕೆಗಳ ಸ್ಥಾಪನೆ ಮತ್ತು ಅವುಗಳಿಗೆ ನೀಡುವ ರಿಯಾಯ್ತಿಗಳು ಕೃಷಿಗೆ ಹೋಲಿಸಿ
ದರೆ ಏನೇನೂ ಸಾಲದು.



ರೈತರು ಬೆಳೆಯುವ ಬೆಳೆಗೆ ಉತ್ತಮ ಬೆಲೆ ನೀಡುವ ಮಾರುಕಟ್ಟೆ ಸೃಷ್ಟಿಸ
ಬೇಕಾಗಿದೆ. ಇದರ ಮೂಲಕ ರಾಷ್ಟ್ರದ ಮಾರುಕಟ್ಟೆ ಹಾಗೂ ಅಂತರಾರಾಷ್ಟ್ರೀಯ
ಮಾರುಕಟ್ಟೆಯಲ್ಲಿ ಸ್ಪರ್ಧಿಗಳಾಗಬೇಕೆಂದರು.

ರೈತರಲ್ಲಿ ಆಧುನಿಕ ತಂತ್ರಜ್ಞಾನದ ಬಗ್ಗೆ ಅರಿವು ಮೂಡಿಸಲು ಕಳೆದ ಹಲ
ವಾರು ವರ್ಷಗಳಿಂದ ವಸ್ತುಪ್ರದರ್ಶನ ಏರ್ಪಡಿಸಿ ತನ್ನದೇ ಆದ ಸೇವೆ ಸಲ್ಲಿಸುತ್ತಿದೆ.
ಸಮಾಜದ ಉನ್ನತಿ ಬಗ್ಗೆ ಸಿದ್ಧಗಂಗಾ ಶ್ರೀಗಳು ಶ್ರಮವಹಿಸುತ್ತಿರುವುದು ಮೆಚ್ಚ
ತಕ್ಕದ್ದಾಗಿದೆ ಎಂದು ಹೇಳಿದರು.

**ಶ್ರೀ ಶ್ರೀಗಳವರ ಆಶೀರ್ವಚನ :** ಪ್ರಜಾಪ್ರಭುತ್ವದಲ್ಲಿ ಎಲ್ಲರ ಪ್ರಗತಿಗಾಗಿ
ಎಲ್ಲರೂ ಶ್ರಮಿಸಬೇಕು. ಬುದ್ಧಿವಂತರಾದ ಯೋಗ್ಯರು ಆಳ್ವಿಕೆ ಮಾಡಬೇಕು.
ಕೃಷಿ ಪ್ರಧಾನ ದೇಶದಲ್ಲಿ ಯುವಕರಲ್ಲಿ ಆಲಸ್ಯ, ಕಾಲಹರಣ ಮಾಡುತ್ತಿರುವ ಮನೋ
ಭಾವ ಕಂಡುಬರುತ್ತಿದ್ದು ಯಾವುದೇ ದೇಶದ ಅಭಿವೃದ್ಧಿ ದುಡಿಮೆ ಹಾಗೂ ಕರ್ತವ್ಯ
ಪ್ರಜ್ಞೆ ಅವಲಂಬಿಸಿರುವುದರಿಂದ ಯುವಕರು ದೇಶದ ಬಗ್ಗೆ ಚಿಂತನೆ ಮಾಡುವ
ಮೂಲಕ ಸಮಾಜದ ಉನ್ನತಿಗೆ ಶ್ರಮಿಸಬೇಕೆಂದರು. ಗ್ರಾಮೀಣ ಬಂಧುಗಳಿಗೆ
ಜಾಗೃತಿ ಮಾಡಲು ವಸ್ತುಪ್ರದರ್ಶನ ಸ್ಫೂರ್ತಿ ಉಂಟು ಮಾಡುತ್ತದೆ. ಇದಕ್ಕೆ
ಎಲ್ಲರೂ ಸಹಕಾರ ನೀಡಿ ಸರ್ಕಾರ ಶಾಶ್ವತ ಅನುದಾನ ನೀಡಬೇಕೆಂದು
ಹೇಳಿದರು.

ತುಮಕೂರು ಜಿಲ್ಲಾಪರಿಷತ್ ಕಾರ್ಯನಿರ್ವಾಹಕರಾದ ಶ್ರೀ ರಾಕೇಶ್‌ಸಿಂಗ್ ಮತ್ತು
ಉಪಾಧ್ಯಕ್ಷರಾದ ಶ್ರೀಮತಿ ಉಮಾಪರಪ್ಪಸ್ವಾಮಿ ವೇದಿಕೆಯಲ್ಲಿ ಉಪಸ್ಥಿತರಿದ್ದರು.
ಪ್ರಾರಂಭಕ್ಕೆ ಕೆ. ಬಿ. ರೇಣುಕಯ್ಯ ಸ್ವಾಗತಿಸಿದರು. ಕೆ. ಹೆಚ್. ಶಿವರುದ್ರಯ್ಯ
ವಂದನೆ ಸಲ್ಲಿಸಿದರು. ಕೆ. ಶಿವರುದ್ರಯ್ಯ ಕಾರ್ಯಕ್ರಮ ನಿರೂಪಿಸಿದರು.

## 32 ನೇ ವಸ್ತು ಪ್ರದರ್ಶನ ಮುಕ್ತಾಯ ಸಮಾರಂಭ

ಜಾತ್ರೆಯ ಅಂಗವಾಗಿ ಏರ್ಪಡಿಸಿದ್ದ ಕೃಷಿ-ಕೈಗಾರಿಕಾ ವಸ್ತು ಪ್ರದರ್ಶನದ
ಮುಕ್ತಾಯ ಸಮಾರಂಭ 22 ಫೆಬ್ರವರಿ 1996 ನೆರವೇರಿತು. ಕೃಷಿ, ಮೀನುಗಾರಿಕೆ,
ತೋಟಗಾರಿಕೆ, ಅರಣ್ಯ, ಹೆಚ್. ಎಂ. ಟಿ. ಕೈಗಡಿಯಾರ, ಹಿಂದೂಸ್ಥಾನ್ ಮಿಷಿನ್
ಟೂಲ್ಸ್, ಕೈಗಾರಿಕೆ, ವಾರ್ತಾ ಮತ್ತು ಪ್ರಸಾರ, ರೇಷ್ಮೆ, ಸಾರ್ವಜನಿಕ ಶಿಕ್ಷಣ
ಇಲಾಖೆಗಳು, ಭಾಗವಹಿಸಿದ್ದವು. ಇದಲ್ಲದೆ ಖಾಸಗೀ ಕ್ಷೇತ್ರದಿಂದ ಅನೇಕ ಮಳಿಗೆ
ಗಳನ್ನು ತೆರೆಯಲಾಗಿತ್ತು. ಎರಡು ಲಕ್ಷ ಮಂದಿ ವಸ್ತು ಪ್ರದರ್ಶನಕ್ಕೆ ಭೇಟಿ
ನೀಡಿದರು.

ರಾಜ್ಯದ ಬೃಹತ್ ಕೈಗಾರಿಕಾ ಮಂತ್ರಿಗಳಾದ ಶ್ರೀ ಆರ್. ವಿ. ದೇಶಪಾಂಡೆ
ಯವರು ಸಮಾರೋಪ ಭಾಷಣ ಮಾಡಿ ಶ್ರೀ ಸಿದ್ಧಗಂಗೆಯ ಮಠದ ಕೆಲಸಗಳು
ಅದ್ಭುತ. ನಮ್ಮ ಭಾರತದಲ್ಲಿ ಇದು ಆದರ್ಶ ಮಠ. ಎಲ್ಲಾ ಧರ್ಮ ಜಾತಿಗೆ
ಸೇರಿದ 5000 ವಿದ್ಯಾರ್ಥಿಗಳಿಗೆ ಆಶ್ರಯ ನೀಡಿರುವ ಪೂಜ್ಯ ಶ್ರೀ ಶ್ರೀ ಶಿವಕುಮಾರ
ಸ್ವಾಮಿಗಳವರ ಸಾಧನೆ ಅದ್ವಿತೀಯವಾದುದು. ಇವರ ತತ್ವದ ಆಧಾರದ ಮೇಲೆ

ದೇಶದಲ್ಲಿ ಎಲ್ಲಾ ಮಠಗಳು, ಚರ್ಚ್‌ಗಳು ಮತ್ತು ಮಸೀದಿಗಳು ಕೆಲಸ ಮಾಡಿದರೆ ರಾಷ್ಟ್ರ ಶೀಘ್ರದಲ್ಲಿ ಪ್ರಗತಿಯಾಗುತ್ತದೆ.

ಪೂಜ್ಯ ಶ್ರೀ ಶ್ರೀ ಗಳು ನಿರಂತರವಾಗಿ 60 ವರ್ಷಗಳ ದೀರ್ಘ ಸೇವೆ ಸಮಾಜ ಮತ್ತು ರಾಷ್ಟ್ರಕ್ಕೆ ಸಲ್ಲಿಸಿದ್ದಾರೆ. ಅಭಿಮಾನ ಪಡುವಂತ ಸ್ಮರಣಾರ್ಹ ಸೇವೆ. ಇದರ ಕುರುಹಾಗಿ ನಿರ್ಮಾಣವಾಗಿರುವ ಸುಂದರವಾದ ಭವ್ಯ ಕಟ್ಟಡಗಳೇ ಸಾಕ್ಷಿ ಎಂದು ನುಡಿದರು.

ಈ ವಸ್ತುಪ್ರದರ್ಶನ ಅನೌಪಚಾರಿಕ ಶಿಕ್ಷಣ ಮಾಧ್ಯಮವಾಗಿ ಲಕ್ಷಾಂತರ ಮಂದಿಗೆ ತಿಳಿವಳಿಕೆ ನೀಡುತ್ತಿದೆ. ಇದು ಇನ್ನೂ ಹೆಚ್ಚು ಪ್ರಗತಿ ಹೊಂದಿ ಜನತೆಗೆ ತಿಳಿವಳಿಕೆ ಮೂಡಿಸಲು ಸರ್ಕಾರದ ಕಾಯಂ ಆಜ್ಞೆ ಮಾಡಿ ಕೊಡುವುದಾಗಿ ಆಶ್ವಾಸನೆ ನೀಡಿದರು.

ಶ್ರೀ ಮಠಕ್ಕೆ ವೈದ್ಯಕೀಯ ಕಾಲೇಜು ನೀಡುವ ಬಗ್ಗೆ ಪ್ರತಿಕ್ರಿಯಿಸಿದ ಸಚಿವರು ಪರಿಶೀಲನೆ ನಡೆಸಲು ಸರ್ಕಾರ ತಜ್ಞರ ಸಮಿತಿ ರಚಿಸಿದ್ದು ವರದಿ ನೀಡಿದ ನಂತರ ಕೊಡುವ ತೀರ್ಮಾನ ಮಾಡಿದರೆ ಪ್ರಥಮ ಆದ್ಯತೆಯನ್ನು ಸಿದ್ಧಗಂಗಾ ಮಠಕ್ಕೆ ಕೊಡಲಾಗುತ್ತದೆ ಎಂದು ಹೇಳಿದರು.

ಸಮಾರಂಭದ ಅದ ಕ್ಷತೆ ವಹಿಸಿದ್ದ ಅರಣ್ಯ ಸಚಿವ ಶ್ರೀ ಹೆಚ್. ವೈ. ಮೇಟಿ ಅವರು ಶ್ರೀ ಮಠದ ಹಾದಿ ಗಾಂಧಿಯವರ ಮಾರ್ಗದಲ್ಲಿ ಮುನ್ನಡೆಯುತ್ತಿದೆ. ಎಲ್ಲ ಜಾತಿ–ಧರ್ಮಗಳ ವಿದ್ಯಾರ್ಥಿಗಳಿಗೆ ಭೇದವಿಲ್ಲದೆ ಆಶ್ರಯ ನೀಡುತ್ತಿರುವ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಹನ್ನೆರಡನೇ ಶತಮಾನದ ಬಸವಣ್ಣನವರ "ಇನ್ನೊಂದು ಅವತಾರ" ಎಂದರು. ಶ್ರೀ ಸಿದ್ಧಗಂಗಾಮಠ ಎಲ್ಲರನ್ನೂ ಸಮಭಾವದಿಂದ ನೋಡುವ ಏಕೈಕ ಧಾರ್ಮಿಕ ಕೇಂದ್ರವೆಂದು ಹೇಳಿದರು.

**ಶ್ರೀ ಶ್ರೀಗಳವರ ಆಶೀರ್ವಚನ**: ನಮ್ಮ ಭಾರತ ದೊಡ್ಡ ಪ್ರಜಾಪ್ರಭುತ್ವ ದೇಶ. ಜಗತ್ತಿಗೇ ಅರಿವಿನ ಬೆಳಕನ್ನು ನೀಡಿದ ಭಾರತ ಇಂದು ಅಂಧಕಾರದಲ್ಲಿ ಮುಳುಗಿ ಕೆಳಮಟ್ಟಕ್ಕೆ ಹೋಗಿದೆ. ಇದಕ್ಕೆ ಪರಿಹಾರ ಜನತೆ ಜಾಗೃತರಾಗಬೇಕು. ಇದಕ್ಕೆ ಪೂರಕವಾಗಿ ವಸ್ತುಪ್ರದರ್ಶನ ಪ್ರಬಲ ಮಾಧ್ಯಮ. ಜನಕಲ್ಯಾಣ ಕಾರ್ಯಕ್ರಮಗಳ ಯಶಸ್ಸಿಗೆ ಜನಶಕ್ತಿ ಪಾಲು ಮುಕ್ಕಾಲುಭಾಗದರೆ ಸರ್ಕಾರದ ಪಾಲು ಕಾಲು ಭಾಗ ಮಾತ್ರ ಎಂದು ಎಚ್ಚರಿಸಿದರು-

ಇದಕ್ಕೆ ಮುನ್ನ ಜಿಲ್ಲಾ ಜನತಾದಳದ ಅಧ್ಯಕ್ಷ ಶ್ರೀ ಲಕ್ಷ್ಮೀನರಸಿಂಹಯ್ಯನವರು ವಸ್ತುಪ್ರದರ್ಶನದಲ್ಲಿ ಭಾಗವಹಿಸಿದ್ದ ವಿವಿಧ ಮಳಿಗೆಗಳಿಗೆ ಬಹುಮಾನಗಳನ್ನು ವಿತರಿಸಿದರು. ಪಾರಿತೋಷಕ ಬಹುಮಾನಗಳನ್ನು ರಾಜ್ಯ ಕೃಷಿ, ಅರಣ್ಯ ಮತ್ತು ಕೈಗಾರಿಕಾ ಇಲಾಖೆಗಳು ಹಾಗೂ ಕೇಂದ್ರ ಸರ್ಕಾರದ ಎಚ್. ಎಂ. ಟಿ. ಕೈಗಡಿಯಾರ ಘಟಕಗಳು ಪಡೆದವು.

ಕೆ. ಬಿ. ರೇಣುಕಯ್ಯ ಸ್ವಾಗತ ಕೋರಿದರು. ಜಿ. ಕುಮಾರಸ್ವಾಮಿ ವರದಿ ಓದಿದರು. ಎಸ್. ಚಂದ್ರಶೇಖರಯ್ಯ ಕಾರ್ಯಕ್ರಮ ನಿರೂಪಿಸಿದರು. ಬಿ. ಸಿದ್ಧಬಸಪ್ಪ ವಂದನೆ ಸಲ್ಲಿಸಿದರು.

"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯನಿದ್ದರೆ ನಿಂದಿರಲೊಲ್ಲ ಕೂಡಲಸಂಗಮದೇವಾ.

–ಶ್ರೀ ಬಸವೇಶ್ವರ

## ಮಾನ್ಯ ಓದುಗರಲ್ಲಿ ಮನವಿ

ನಿಮ್ಮ ವಿಳಾಸ ಬದಲಾವಣೆಯಾದರೆ "ಸಿದ್ಧಗಂಗಾ" ಮನೆ ತಲುಪುವುದಿಲ್ಲ. ನಮ್ಮ ಕಾರ್ಯಾಲಯಕ್ಕೆ ಹಿಂದಿರುಗುತ್ತದೆ. ಕೂಡಲೆ ಬದಲಾವಣೆ ವಿಳಾಸ ಕುರಿತು ಇಲ್ಲಿಗೆ ಬರೆಯಿರಿ-

ಮರೆಯದೆ ನಿಮ್ಮ ಆಜೀವ ಸದಸ್ಯತ್ವ ಸಂಖ್ಯೆ LM- ಸೂಚಿಸಬೇಕು.

---

ಪ್ರಕಾಶಕರು
**ಸಿದ್ಧಗಂಗಾ ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ, ತುಮಕೂರು-572104.

---

**ಗಮನಿಸಿ :**

ಶ್ರೀ ಮಠಕ್ಕೆ ಭೇಟಿ ಇತ್ತಾಗ "ಸಿದ್ಧಗಂಗಾ ಮಾಸ ಪತ್ರಿಕೆಗೆ ಓದುಗರಾಗಿ ವಾರ್ಷಿಕ ಸದಸ್ಯತ್ವ /ಆಜೀವ ಸದಸ್ಯತ್ವ ಪಡೆಯಲು ಶ್ರೀ ಮಠದ ಆವರಣದಲ್ಲಿರುವ ಪುಸ್ತಕ / ಫೋಟೊ ಕೌಂಟರ್ / ಶ್ರೀ ದರ್ಶನ ಮಂಟಪ ಮತ್ತು ಮಾಸ ಪತ್ರಿಕೆ ಕಾರ್ಯಾಲಯ ಸಂಪರ್ಕಿಸಿ.

**ವಾರ್ಷಿಕ ಚಂದಾ : 35/- ರೂ**

**ಆಜೀವ ಸದಸ್ಯತ್ವ : 500/- ರೂ**

**ಪ್ರಕಾಶಕರು**
ಸಿದ್ಧಗಂಗಾ ಮಾಸ ಪತ್ರಿಕೆ, ಶ್ರೀ ಸಿದ್ಧಗಂಗಾ ಮಠ.
ತುಮಕೂರು-572104

---

**ವಾಚಕರಲ್ಲಿ ವಿನಂತಿ,**

ಸಿದ್ಧಗಂಗಾ ಕ್ಕೆ ಚಂದಾದಾರರಾಗುವಂತೆ ನಿಮ್ಮ ಬಂಧು ಮಿತ್ರರನ್ನು ಪ್ರೋತ್ಸಾಹಿಸಿ ಸದಾಚಾರ / ಸತ್ಯವಾಣಿ / ಸತ್‌ಕ್ರಿಯಾಚರಣೆಯಲ್ಲಿ ಪಾಲ್ಗೊಳ್ಳಿಲಿ.

---

ಚಂದಾ ಮೊಬಲಗನ್ನು ಎಂ.ಓ. ಮೂಲಕ **ಸಿದ್ಧಗಂಗಾ** ಮಾಸ ಪತ್ರಿಕೆ ಹೆಸರಿನಲ್ಲಿ ಕೆಳಗಿನ ವಿಳಾಸಕ್ಕೆ ಕಳುಹಿಸಿ.

ಆಜೀವ ಸದಸ್ಯರಾದರೆ ಸಿದ್ಧಗಂಗಾ ನಿರಂತರವಾಗಿ ನಿಮ್ಮ ಮನೆ ತಲುಪುತ್ತದೆ.

ವಾರ್ಷಿಕ ಚಂದಾ 35-/ ರೂಗಳು
ಆಜೀವ ಸದಸ್ಯತ್ವ ಚಂದಾ 500-/ ರೂಗಳು

ಪ್ರಕಾಶಕರು,
**ಸಿದ್ಧಗಂಗಾ ಮಾಸ ಪತ್ರಿಕೆ.**
ಶ್ರೀ ಸಿದ್ಧಗಂಗಾ ಮಠ, ತುಮಕೂರ-572104

## ನಡೆದು ಬಂದದಾರಿ ಹರ್ಷದಾಯಕ ಮುಂದಿರುವ ದಾರಿ ಆಶಾದಾಯಕ

46 ವರ್ಷಗಳ ಹಿಂದೆ ನಮ್ಮ ರಾಜ್ಯಾಂಗದ ಶಿಲ್ಪಿಗಳು ದೇಶದ ಭವಿಷ್ಯದ ನಕಾಸೆಯನ್ನು ಬಿಡಿಸಿದರು. ಪ್ರಜೆಗಳಿಗೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯನ್ಯಾಯ ದೊರೆಯಬೇಕೆಂಬ ಭರವಸೆ ತುಂಬಿದ ರಾಜ್ಯಾಂಗವನ್ನು ನಮಗಿತ್ತರು. ಜನರ ಮೂಲಭೂತ ಹಕ್ಕುಗಳನ್ನು ಕಾಪಾಡುವ ಹಾಗೂ ಅವರ ಆಶೋತ್ತರಗಳನ್ನು ಈಡೇರಿಸುವ ದಿಸೆಯಲ್ಲಿ ಕರ್ನಾಟಕವು ಸಕ್ರಿಯ ಪಾತ್ರ ವಹಿಸಿದೆ.

ಮುಖ್ಯಮಂತ್ರಿ ಶ್ರೀ ಹೆಚ್. ಡಿ. ದೇವೇಗೌಡ ಅವರ 1 ವರ್ಷದ ಅಧಿಕಾರಾವಧಿಯಲ್ಲಿ ರಾಜ್ಯ ಸರ್ವತೋಮುಖ ಅಭಿವೃದ್ಧಿ ಸಾಧಿಸಿದೆ.

ಹೊಸ ಸರ್ಕಾರವು ಹಲವಾರು ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಅನುಷ್ಠಾನಕ್ಕೆ ತಂದಿದೆ. ಈ ಕಾರ್ಯಕ್ರಮಗಳ ಪ್ರತಿಫಲ ಸಕಾಲದಲ್ಲಿ ಅರ್ಹ ಫಲಾನುಭವಿಗಳಿಗೆ ತಲುಪಿಸುವ ಹೊಣೆಯನ್ನು ಸರ್ಕಾರ ಹೊತ್ತಿದೆ.

ಸ್ಥಿರ ಆಡಳಿತ:- ಸರ್ಕಾರದಲ್ಲಿ ಸ್ಥಿರತೆ, ಆಡಳಿತದಲ್ಲಿ ಸ್ವಚ್ಛತೆ, ಜನಮನಕ್ಕೆ ಸ್ಪಂದಿಸುವ ಮನೋಭಾವ ಜನರ ಬಾಗಿಲಿಗೆ ಕೊಂಡೊಯ್ಯಲು ಕ್ರಮ.

ವಿದ್ಯುಚ್ಛಕ್ತಿ :- ರಾಜ್ಯದಲ್ಲಿ ದಿನಕ್ಕೆ 62 ದಶಲಕ್ಷ ಯೂನಿಟ್‌ಗಳ ವಿದ್ಯುತ್ ಪೂರೈಕೆಯಾಗುತ್ತಿರುವುದು 53 ದಶಲಕ್ಷ ಯೂನಿಟ್ ಮಾತ್ರ. ಈ ತೀವ್ರ ವಿದ್ಯುತ್ ಅಭಾವವನ್ನು ತ್ವರಿತಗತಿಯಲ್ಲಿ ನೀಗಲು ಕ್ರಮ. ಪಶ್ಚಿಮ ಕರಾವಳಿಯಲ್ಲಿ ಕೇವಲ 6 ತಿಂಗಳ ಅವಧಿಯಲ್ಲಿ 400 ಮೆ.ವಾ. ವಿದ್ಯುತ್ ಉತ್ಪಾದಿಸಬಲ್ಲ ಬಾರ್ಜ್-ಮೌಂಟೆಡ್ ಯೋಜನೆ. ಕೊಜೆಂಟ್ರಿಕ್ಸ್ ವಿದ್ಯುತ್ ಸ್ಥಾವರದಿಂದ ಮುಂದಿನ 3ವರ್ಷದೊಳಗೆ 1000 ಮೆ.ವಾ. ವಿದ್ಯುತ್ ಉತ್ಪಾದನೆ. ರಾಯಚೂರು 5 ಮತ್ತು 6ನೇ ಘಟಕಗಳಿಂದ ಮುಂದಿನ 3 ವರ್ಷಗಳಲ್ಲಿ 420 ಮೆ.ವಾ. ವಿದ್ಯುತ್ ಕದ್ರ ಮತ್ತು ಕೊಡಸಳ್ಳಿ ಯೋಜನೆಗಳಿಂದ ಇನ್ನು 18 ತಿಂಗಳೊಳಗಾಗಿ 270 ಮೆ.ವಾ. ಮತ್ತು ಖಾಸಗಿ ಕ್ಷೇತ್ರಗಳಿಂದ 3000 ಮೆ.ವಾ. ಉತ್ಪಾದನೆ ಕ್ರಮ.

**ನೀರಾವರಿ:-** ಕೃಷ್ಣಾ ಮೇಲ್ದಂಡೆ ಯೋಜನೆ ತ್ವರಿತರೀತಿಯಲ್ಲಿ ಪೂರ್ಣಗೊಳ್ಳಲು ಕೃಷ್ಣ ಭಾಗ್ಯ ಜಲನಿಗಮದ ವತಿಯಿಂದ ಬಾಂಡ್‌ಗಳ ಮೂಲಕ ಹಣಸಂಗ್ರಹಿಸಲು ಬಿರುಸಿನ ಕಾರ್ಯಕ್ರಮ. 2 ಹಂತಗಳ ಈ ಯೋಜನೆಯ ಮೊದಲ ಹಂತದಲ್ಲಿ ಈ ಯೋಜನೆಯ ಮೊದಲ ಹಂತದಲ್ಲಿ 425000 ಹೆಕ್ಟೇರ್ ಒಣ ಜಮೀನಿಗೆ 119 ಟಿ.ಎಂ.ಸಿ. ನೀರಿನ ಸೌಲಭ್ಯ.

ವಸತಿ :- ರೂ. 483 ಕೋಟಿ ವಸತಿ ಯೋಜನೆ, ನಗರ ಪ್ರದೇಶದ ದುರ್ಬಲ ವರ್ಗದವರಿಗೆ ಬಡಗ್ರಾಮದ ವಾಸಿಗಳಿಗೆ ಉಚಿತ ನಿವೇಶನ. ಆಶ್ರಯ ಯೋಜನೆಯಡಿ 60,000 ನಿವೇಶನ ಹಂಚಿಕೆ ಮತ್ತು ಈ ಯೋಜನೆಯಡಿ ಗೃಹ ನಿರ್ಮಾಣಕ್ಕೆ ರೂ. 10,000-00 ಸಹಾಯ-ಧನ. ರೂ. 10,000 ಬ್ಯಾಂಕ್ ಸಾಲಸೌಲಭ್ಯ. ಅಂಬೇಡ್ಕರ್ ಯೋಜನೆಯಡಿ ಪ.ಜಾ.ಪ.ಪ. ಬುಡಕಟ್ಟಿನವರಿಗೆ 25,000 ಮನೆಗಳ ನೀಡಿಕೆ.

ಪ.ಜಾ.ಯವರ ಅಭಿವೃದ್ಧಿಗೆ ರೂ. 338 ಕೋಟಿ. ಗಿರಿಜನರಿಗೆ ರೂ. 68ಕೋಟಿ. ಅಂಗವಿಕಲರಿಗೆ ಸವಲತ್ತುಗಳು, ಮಹಿಳೆಯರಿಗೆ ಸರ್ಕಾರಿ ಉದ್ಯೋಗಗಳಲ್ಲಿ, ಪಾಲಿಟೆಕ್ನಿಕ್‌ಗಳಲ್ಲಿ ಮೀಸಲಾತಿ, ಸ್ವಾತಂತ್ರ್ಯ ಹೋರಾಟಗಾರರಿಗೆ ಉಚಿತ ಬಸ್‌ಪಾಸ್, ಅಂಗನವಾಡಿ ಕಾರ್ಯಕರ್ತೆಯರಿಗೆ ಸಂಭಾವನೆಯಲ್ಲಿ ಹೆಚ್ಚಳ.

**ಕರ್ನಾಟಕ ಸಮೃದ್ಧ ಭವಿಷ್ಯಕ್ಕೆ ಹಾದಿ** ಕರ್ನಾಟಕ ವಾರ್ತೆ





Hotel Shree Nanjundeswara




ಸ್ಥಾಪನೆ: 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288 }

ಕೇಂದ್ರ ಕಛೇರಿ : { 72866, 70204 }

ಮಿನಿ ಬಜಾರ್: 351114

## ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009.

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1994-95 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 9.00 ಲಕ್ಷ
ಸರ್ಕಾರದಿಂದ ರೂ. 14-32 ಲಕ್ಷ
ಒಟ್ಟು ರೂ. 23.32 ಲಕ್ಷ

1) ಸದಸ್ಯರ ಸಂಖ್ಯೆ : 5451
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 2,115.30 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 194.12 ಲಕ್ಷ
5) 1994-95 ರಲ್ಲಿ ನಿವ್ವಳ ಲಾಭ : ರೂ. 2.01 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಅ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಮತ್ತು ಸೋಮೇಶ್ವರಪುರದಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗಳಿವೆ.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ.ಟಿ. ಉಮೇಶ್
ಅಧ್ಯಕ್ಷರು
2) ಶ್ರೀ ಆರ್. ನೀಲಕಂಠಯ್ಯ
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯ
4) ಶ್ರೀ ಎಲ್.ಎಸ್. ಕುಮಾರಸ್ವಾಮಿ
5) ಶ್ರೀ ಗುರುನಂಜಯ್ಯ
6) ಶ್ರೀ ಜಿ. ಶಿವಕುಮಾರ್
7) ಶ್ರೀ ಎಲ್. ರಾಜಪ್ಪ
8) ಶ್ರೀ ಹೆಚ್.ಎಸ್. ಶಿವಲಿಂಗಯ್ಯ
9) ಶ್ರೀ ಬಿ.ಎಂ ಶ್ರೀಕಂಠಸ್ವಾಮಿ
10) ಶ್ರೀ ಸಿ. ಕೆ. ಬಸವರಾಜು
11) ಶ್ರೀ ಬಿ. ಜಿ. ನಾಗಬಸಪ್ಪ
12) ಶ್ರೀಮತಿ ಎಸ್. ಗಿರಿಜ
13) ಶ್ರೀ ಬಿ.ಎಸ್. ಕೆಂಪರಾಜು ಸ.ನಾ.ನಿ.
14) ಶ್ರೀಮತಿ ಮಮತಾವಿಶ್ವನಾಥ್ ಸ.ನಾ.ನಿ.
15) ಶ್ರೀ ಎಲ್. ಗೋವಿಂದರಾಜು ಸ.ನಾ.ನಿ.
16) ಶ್ರೀಮತಿ N.S. ಸೌಭಾಗ್ಯಮ್ಮ ಬಿ.ಡಿ.ಸಿ.ಸಿ.ನಿ.
17) ಶ್ರೀ ಎ. ಪ್ರಸನ್ನಕುಮಾರಸ್ವಾಮಿ
ಪ್ರಧಾನ ವ್ಯವಸ್ಥಾಪಕರು.

## ಕಡಿಮೆ ಹಣ ಖರ್ಚುಮಾಡಿ

## ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ' ನೀಲಂ ಬಾರ್ ಸೋಪ್ 'ಕಸ್ತೂರಿ' ನೀಲಂ ಬಾರ್ ಸೋಪ್

**ರಾಮಕೃಷ್ಣ ಆಯಿಲ್ ಮಿಲ್, ತುಮಕೂರು**




ಈ ಸಮಾರಂಭದಲ್ಲಿ ಬೃಹತ್ ಕೈಗಾರಿಕಾ ಸಚಿವ ಶ್ರೀ ಆರ್. ವಿ. ದೇಶಪಾಂಡೆಯವರು ಮಾತನಾಡುತ್ತಿರುವುದು. ಚಿತ್ರದಲ್ಲಿ ಶ್ರೀ ಶ್ರೀಗಳು, ಅರಣ್ಯ ಸಚಿವ ಶ್ರೀ ಮೇಟಿಯವರು, ಶ್ರೀ ಬಿ. ಎಸ್. ಮುದ್ದಪ್ಪ, ಐ.ಎ.ಎಸ್. ಮತ್ತು ಶ್ರೀ ಲಕ್ಷ್ಮೀನರಸಿಂಹಯ್ಯನವರನ್ನು ಕಾಣಬಹುದು.



ಶ್ರೀ ಶ್ರೀಗಳ ವ.ಮ.ಸ. ಅರ್ಪಿಸಲಿರುವ ಸುಂದರ ಕಲಾತ್ಮಕ ಬೃಹತ್ ಪ್ರಸಾದ ನಿಲಯ.

"SIDDAGANGA" MONTHLY Reg. No. KRNQ - 9



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.